( ಖಾಸಗಿ ಪ್ರಸಾರಕ್ಕಾಗಿ ಮಾತ್ರ. )

# ಜನವಾದಿ

ಹೊಸ ಸೃಷ್ಟಿಗೆ .... ಹೊಸ ದೃಷ್ಟಿ

ಜನತೆಯು ಎದೆಯಲ್ಲಿ
ಹೋರಾಟದ ಬೀಜಗಳು :
ಮೈ ದಾಳಿ ನಿಂತಿವೆ
ನೂರಾರು ಹೂಗಳು.

ಹೊಸ ಸೃಷ್ಟಿಗೆ – ಹೊಸ ದೃಷ್ಟಿ.


## — ಜನವಾದಿ —

ಸಂಪುಟ : 1    ಸಂಚಿಕೆ : 9

ಅಕ್ಟೋಬರ್ 1988.



ಸಂಪಾದಕರು :-
ಕೆ. ಫಣಿರಾಜ್,
ಪರಶುರಾಮ ಕಲಾಲ್

ಸಹ – ಸಂಪಾದಕರು :-
ಅಂಬಿಕಾ ಜಾಲಗಾರ,
ಕೆ. ಅಶೋಕ ಕುಮಾರ,



ಮುದ್ರಣ :-
ಶ್ರೀ ಸಿದ್ಧೇಶ್ವರ ಪವರ್ ಪ್ರಿಂಟರ್ಸ್,
ಐ. ಎಸ್. ಆರ್. ರೋಡ್, ಹೊಸಪೇಟೆ.



ಸಂಪರ್ಕ ವಿಳಾಸ :

ಸಂಪಾದಕರು,
ಜನವಾದಿ ಮಾಸಿಕ
C/o ಶ್ರೀ ಕೃಷ್ಣ ಬುಕ್ ಸ್ಟಾಲ್,
ಹಳೇಬಸ್ ನಿಲ್ದಾಣ ರಸ್ತೆ
ಹೊಸಪೇಟೆ – 583 201


□ ಜನಪದ ಮೌಲ್ಯಗಳನ್ನು ಪ್ರತಿನಿಧಿಸುವನಿಮ್ಮ ಲೇಖನಗಳನ್ನು ಸಾಹಿತ್ಯಿಕ, ವೈಚಾರಿಕ, ವಿಮರ್ಶೆ ಇ. ಇ. ಗಳಿಗೆ ಸ್ವಾಗತವಿದೆ,

□ ಬರಹಗಳ ಕುರಿತು ನಿಮ್ಮ ಗಂಭೀರ ಚರ್ಚೆಗೆ 'ಜನವಾದಿ' ಕಿಟಕಿ ಬಾಗಿಲು ತೆರೆದಿರುತ್ತದೆ.

□ ಸಮಾನಾಸಕ್ತರಲ್ಲಿ ಸಂಪರ್ಕ ಸಂವಾದಿಯಾಗಲು ಜನವಾದಿ ಬಯಸುತ್ತದೆ

## ಶುಭಾಶಯಗಳು

ನಮ್ಮ 'ಜನವಾದಿ' ಯ ಗೆಳೆಯ ಮತ್ತು ಓದುಗನಾದ ಕೋದಂಡರಾಮ ಮತ್ತು 'ಜನವಾದಿ' ಕವಿಯಿತ್ರಿ ನೀಲಾ, ಕೆ. ಇವರಿಬ್ಬರೂ ಬೀದರ್‌ನ 'ಸಮುದಾಯ' ಗೆಳೆಯರ ನೇತೃತ್ವದಲ್ಲಿ ಕಳೆದ ದಿನಾಂಕ 22–8–88 ರಂದು ಅಂತರ್ಜಾತೀಯ 'ಪ್ರೇಮ ವಿವಾಹ' ವಾಗಿರುವುದು 'ಜನವಾದಿಗೆ' ಸಂತಸದ ಸಂಗತಿ. ಈ ಜೋಡಿಗೆ ಜನವಾದಿ ಬಳಗದ ಶುಭ ಹಾರೈಕೆಗಳು.

## ಸಂಪಾದಕೀಯ ........

ಒಬ್ಬ ಹುಡುಗನಿದ್ದ,
ಆಕಾಶದಲ್ಲಿ ಬಣ್ಣಬಣ್ಣದ ಹಕ್ಕಿಗಳಂತೆ ಹಾರುವ ಕನಸು ಕಾಣುತ್ತಿದ್ದ.
ಹಕ್ಕಿಗಳ ರೆಕ್ಕೆಪುಕ್ಕ ಸೇರಿಸಿ, ಅಂಟಿಸಿಕೊಂಡು ಹಾರಲು ಪ್ರಯತ್ನಿಸಿ ಮಂಡಿ ಕೆತ್ತಿಸಿಕೊಂಡ,
ರಕ್ತ ಒಸರಿತು. ಆಕಾಶದಲ್ಲಿ ಹಾರುವ ಕನಸು ಬತ್ತಲಿಲ್ಲ.
ಒಂದುದಿನ ಆ ಕನಸಿಗೆ ಕಾಲು ಬಂದಿತು, ಕಣ್ಣು ಮೂಡಿತು,
ರೆಕ್ಕೆಗಳು ಹುಟ್ಟಿಕೊಂಡವು.
ವಿಮಾನ ಬೆಳೆದು ಬಂದ ಕತೆ ಇದು.

ಈ ಯಂತ್ರಜಗತ್ತಿನಲ್ಲಿ ಸಿನಿಕತನವೇ ಜೀವನಧರ್ಮವಾಗುವ ಅಪಾಯವಿರುವಾಗ ಎಂಥ ಕ್ರಿಯೆಯೂ ಸಾಧ್ಯವಿಲ್ಲವೆಂದು ಕೈಚೆಲ್ಲಿ ಕೂಡುವ ಜಾಯಮಾನ ಜನಪ್ರಿಯವಾಗುತ್ತಿರುವಾಗ, ಕನಸು ಕಾಣುವುದು ಮೊದಲ ಮಜಲು.
ಸಾಹಸ ಎನ್ನುವಂತಾದ್ದು ಕಷ್ಟಕರವಾದರೂ ಇದರೊಟ್ಟಿಗೆ ಹೆಣೆದುಕೊಂಡಿರುತ್ತದೆ.
ಆಕಾಶದಲ್ಲಿ ವಿಹರಿಸುವವರು ಗುರುತ್ವಾಕರ್ಷಣೆಯಿಂದ ತಪ್ಪಿಸಿಕೊಳ್ಳಲು ಹೇಗೆ ಸಾಧ್ಯ?
ಎಲ್ಲಾ ಕನಸುಗಳು ಈ ನೆಲದ ಸೂತ್ರದೊಂದಿಗೆ ಬಂಧಿಸಲ್ಪಟ್ಟಿರಲಿ, ಇಲ್ಲವಾದರೆ ನಿಜದ ಮೊನೆ ತಾಗಿದ ಬೆಲೂನಿನಂತೆ ಉಸಿರು ಕಳೆದುಕೊಳ್ಳುವುದು ವಾಸ್ತವ.
ಕನಸು ಹಳವಂಡವಾಗಿ ಕಾಡಿ, ಸಾಹಸದ ಬೆನ್ನೇರಿದಾಗ ಸಾಹಸ ವಾಸ್ತವತೆಯೊಂದಿಗೆ ಕೈ ಜೋಡಿಸಿ ಸೃಜನತೆಯ ರೂಪ ಪಡೆಯುತ್ತದೆ.

'ಜನವಾದಿ' ಬೆಳೆದು ಬಂದಿದ್ದು ಈಗೇ,
ಗೆಳೆಯರ ಉತ್ಸಾಹದಿಂದ ಸೈಕ್ಲೋಸ್ಟೈಲ್‌ನಲ್ಲಿ ಮುಖ ತಿರುಗಿಸಿಕೊಂಡು 'ಕಸೂತಿ' ಮುಖದಲ್ಲಿ ಬರುತ್ತಿದ್ದ ಪುಟ್ಟ ಜನವಾದಿ ಈಗ ಮೊಳೆಯಚ್ಚಿಗೆ ಸರಿದು ಪಡಿಯಚ್ಚಿನಲಿ ಹೊರತರುವುದು ಬೆಚ್ಚಿಬೀಳಿಸುವ ಸಾಹಸ.
ಈ ಕಷ್ಟಕರ ಕ್ರಿಯೆಗಳಲ್ಲಿ ಕನಸು ಕಾಣುವ ಕಣ್ಣುಗಳಿವೆ,
ನನಸು ಗೊಳಿಸುವ ಮನಸ್ಸುಗಳಿವೆ, ದುಡಿಯುವ ಕೈಗಳಿವೆ,
ಕವಿ ರಾಘವಾಂಕನ ಮಾತಿನಂತೆ,
ನಡಿಯುವವನು ಎಡವಬಲ್ಲನೇ ಹೊರತು ಕುಳಿತವನು ಎಡವಲು ಸಾಧ್ಯವೇ ?
ನಿಮ್ಮೊಂದಿಗೆ ನಡೆಯುವುದನ್ನು ಎಡವುತ್ತಲೇ ಕಲಿಯುತ್ತೇವೆ.
ನಾವು, ನಮ್ಮೊಳಗಿನ ಪತ್ರಿಕೆ.

— ಪರಶುರಾಮ ಕಲಾಲ್.

"ನಮ್ಮ ಸಾಂಸ್ಕೃತಿಕ ಸನ್ನಿವೇಶದಲ್ಲಿ ಕಿರುಪತ್ರಿಕೆಗಳಿಗಿರುವ ಮಹತ್ವವನ್ನು ಅರಿಯಬೇಕಾದರೆ ನಮ್ಮ ವಿದ್ಯಾವಂತ ವರ್ಗದ ರಾಜಕೀಯ ನಂಬಿಕೆಗಳಿಗೂ ಮತ್ತು ಈ ವಿದ್ಯಾವಂತ ವರ್ಗ ನಿಜವಾಗಿ ಅನುಭವಿಸಬೇಕಾಗಿದ್ದ ಶ್ರೇಷ್ಠ ಸಾಹಿತ್ಯವನ್ನು ನಾವು ತಿಳಿದುಕೊಳ್ಳಬೇಕು"

— ಲಯೊನೆಲ್ ಟ್ರಿಲ್ಲಿ

( :The Function of the little Magagine ; ನಲ್ಲಿ )

ಕಿರುದಾರಿಯಲಿ

ನಡೆದಿರುವೆ

ನನ್ನ ಹೆಜ್ಜೆಗಳ

ಗುರುತು ಮೂಡಿಸುವ

ತವಕದಲ್ಲಿ

ಅಲ್ಲಿ ಸಂಧಿಸಿದರೆ ನೀನು

ಜೊತೆಯಾಗಿ ಸಾಗೋಣ ನಾವು

— ಅಶೋಕ ಕುಮಾರ್, ಕೆ

# “ಸಿನಿಮಾ” ಎಂಬ ಮಾಧ್ಯಮ.

ಕೆ. ಫಣಿರಾಜ್,

ನಾವು ಪ್ರಾಥಮಿಕ ಶಾಲೆಗಳಿದ್ದಾಗ ಕ್ರಿಕೆಟ್ ಆಡುತ್ತಿದ್ದೆವು. ಕ್ರಿಕೆಟ್ ಎಂದರೆ ಬ್ಯಾಟ್, ಬಾಲು ಮತ್ತು ವಿಕೆಟ್‌ಗಳಿಂದ ಕೂಡಿದ ಆಟ ಎಂಬುದಷ್ಟೇ ನಮ್ಮ ಅರಿವಾಗಿತ್ತು. ಅತ್ಯಂತ ವೇಗವಾಗಿ ಚೆಂಡೆಸೆಯುವುದು ಮತ್ತು ಹೇಗಾದರೂ ಮಾಡಿ ಬ್ಯಾಟಿನಿಂದ ತಳ್ಳುವುದು ಇದು ನಮ್ಮ ಕಲಾಗಾರಿಕೆಯಾಗಿತ್ತು. ಈ ಆಟ ಚಿನ್ನಿದಾಂಡಿನ ಬೇರೆ ರೂಪವಾಗಿತ್ತಷ್ಟೇ. ಈಗಲೂ ಅದೇ ವಯಸ್ಸಿನ ಹುಡುಗರು ಕ್ರಿಕೆಟ್ ಆಡುವುದನ್ನು ನೋಡುತ್ತೇನೆ. ಆದರೆ ನಮ್ಮಲ್ಲಿದ್ದ ಒರಟುತನವಿಲ್ಲ ಈ ಆಟದ ಎಲ್ಲ ಕಲಾವಂತಿಕೆಯನ್ನು ಅವರು ಸೂಕ್ಷ್ಮವಾಗಿ ಅನುಸರಿಸುತ್ತಿದ್ದಾರೆ. ನಿಜವಾದ ಕ್ರಿಕೆಟ್‌ಗೆ ಅವರು ನಮಗಿಂತ ಎಷ್ಟೋ ಪಾಲು ಹತ್ತಿರವಾಗುತ್ತಿದ್ದಾರೆ. ಸಿನಿಮಾದ ಬಗ್ಗೆ ಬಿಟ್ಟು ಇದನ್ನ ಯಾಕೆ ಮಾತಾಡ್ತಿದ್ದೇನೆ? ಒಂದು ಸಮೂಹಮಾಧ್ಯಮ ತನ್ನೆಲ್ಲ ಶಕ್ತಿಯಿಂದ ನಮ್ಮ ಜೀವನದ ಅಂಗಗಳ ಮೇಲೆ ಯಾವ ರೀತಿ ಪರಿಣಾಮ ಬೀರಬಲ್ಲದು ಎಂಬುದರ ಪ್ರಸ್ತಾವನೆಗಾಗಿ ಈ ಮಾತುಗಳನ್ನು ಹೇಳಬೇಕಾಯ್ತು. ‘ದೂರದರ್ಶನ’ ಸಾಮಾನ್ಯ ಊರುಗಳನ್ನು ತಲುಪುತ್ತಿರುವುದು, ಕ್ರಿಕೆಟ್‌ನಂತಹ ಆಟದ ಸೂಕ್ಷ್ಮಾತಿಸೂಕ್ಷ್ಮ ಅಂಶಗಳು, ತಾಂತ್ರಿಕ ಸೌಲಭ್ಯದಿಂದಾಗಿ, ನಮ್ಮ ಹುಡುಗರ ಕಣ್ಣೆವೆಗಳ ಮೂಲಕ ಮೆದುಳಿನಲ್ಲಿ ನವಿರೆಬ್ಬಿಸುತ್ತಿರುವುದು, ಈ ಮೂಲಕ ಈ ಕ್ರೀಡೆಯ ಬಗೆಗಿನ, ನಮಗೆ ದಕ್ಕದಿರದ, ಅರಿವೊಂದು ಈ ಮಕ್ಕಳ ಅರಿವಿನೊಳಗೆ ಹಬ್ಬಿ ಹೊಸ ಬಗೆಯೊಂದು ಮೂಡುವುದು, ಇವೆಲ್ಲ ಸಮೂಹ ಮಾಧ್ಯಮ ಒಂದರ ಪ್ರಬಲತೆಯನ್ನು ಗಾಢವಾಗಿ ಬಿಂಬಿಸುತ್ತದೆ. ನಾವು ಎಷ್ಟೇ ನಿರ್ಲಕ್ಷಿಸಿದರೂ, ತನ್ನ ಸಾಕ್ಷಾತ್ಕಾರವನ್ನ ಸಮಾಜಜೀವನಕ್ಕೆ ದೂರದರ್ಶನ, ಸಿನಿಮಾದಂತಹ ಜನಪ್ರಿಯ ಮಾಧ್ಯಮಗಳು ತೋರುತ್ತಲೆ ಇವೆ. ಹೀಗಾಗಿ ಈ ಮಾಧ್ಯಮಗಳ ಎಲ್ಲ ಪ್ರಯತ್ನಗಳನ್ನು ನಾವು ಕಾಳಜಿಯಿಂದ ನೋಡಲೇಬೇಕಾಗಿದೆ. ಈ ಮಾಧ್ಯಮದ ಒಳ್ಳೇ ಪ್ರಯತ್ನಗಳು ಮನುಷ್ಯ ಸಾಧನೆಯ ಬಗ್ಗೆ ಎದೆಬೀಗುವಂತೆ ಮಾಡಿದ್ದರೂ, ಇದರ ಇನ್ನೊಂದು ಮುಖ, ಮನುಷ್ಯತ್ವದ ಅಂತಸತ್ವಕ್ಕೆ ಮಾರಕವಾಗಬಲ್ಲದಾಗಿದೆ. ಇಷ್ಟೆಲ್ಲ ದೀರ್ಘ ಮುನ್ನುಡಿಯನ್ನು ನಾನು ‘ನಾಯಗನ್’ ಎಂಬ ಸಿನಿಮಾದ ಬಗ್ಗೆ ಮಾತಾಡಲು ಮಂಡಿಸಿದ್ದೇನೆ.

ನಮ್ಮಲ್ಲಿ ಬಹಳಷ್ಟು ಮಂದಿ ಈ ಚಿತ್ರ ಆಗಲೇ ನೋಡಿದ್ದೇವೆ. ನೋಡದವರು ಇದರ ಬಗ್ಗೆ ಕೇಳಿದ್ದೇವೆ. ಈ ಚಿತ್ರ ಮೂರು ರಾಷ್ಟ್ರೀಯ ಪ್ರಶಸ್ತಿ ದಕ್ಕಿಸಿಕೊಂಡಿದೆ, ‘ಆಸ್ಕರ್’ ಪ್ರಶಸ್ತಿಗೆ ಸ್ಪರ್ಧಿಸುವತನಕವೂ ತನ್ನ ಖ್ಯಾತಿ ಹಬ್ಬಿಸಿಕೊಂಡಿದೆ. ನಾನು ವೈಯಕ್ತಿಕವಾಗಿ ಹೇಳಬೇಕೆಂದರೆ, ನಾನು ಸಿನಿಮಾವನ್ನು ಅಭ್ಯಸಿಸಲು ಪ್ರಾರಂಭಿಸಿದ ನಂತರ ಕಂಡುಕೊಂಡ ಶ್ರೇಷ್ಠ ಕಲಾನಿರ್ದೇಶನ ಮತ್ತು ಛಾಯಾಗ್ರಹಣವನ್ನು ಈ ಸಿನಿಮಾ ಹೊಂದಿದೆ. ನಿರ್ದೇಶಕನ ಜಾಣ್ಮೆಯ ಬಗ್ಗೆ ಹೊಗಳದೇ ಇರಲಾಗುವುದೇ ಇಲ್ಲ. ‘ಮತ್ತೇನು ಸ್ವಾಮಿ?, ಎಂದು ಕೇಳುತ್ತೀರಾ? ಈ ಎಲ್ಲ ಉತ್ತಮತೆ ಪಡುವೆಯೂ ಇದೊಂದು ಕೆಟ್ಟ ಸಿನಿಮಾವಾಗಿದೆ!

ಸಿನಿಮಾವನ್ನು ಬರೀ ತಾಂತ್ರಿಕ ಹಂದರ, ಈ ಹಂದರದ ಶ್ರೇಷ್ಠತೆಯೇ ಸಿನಿಮಾದ ಶ್ರೇಷ್ಠತೆ ಎಂದು ನಂಬುವವರಿಗೆ ಮೇಲಿನ ನನ್ನ ಅಭಿಪ್ರಾಯ ಹುರುಳಿಲ್ಲದ್ದು ಎನಿಸಬಹುದು. ಆದರೆ ಸಿನಿಮಾ ಈ ತಾಂತ್ರಿಕ ಹಂದರದೊಳಗೆ 'ಸಾವಯುವ ಜೀವ' (ಆರ್‌ಗ್ಯಾನಿಕ್ ಲೈಫ್) ತುಂಬಿಕೊಂಡಿರುವ ಮಾಧ್ಯಮ, ಈ ಕಾರಣಕ್ಕಾಗಿಯೇ ನಮ್ಮ ಸಾಮಾಜಿಕ ಬದುಕಿನ ಜೊತೆ ನೇರ ಮತ್ತು ನಿಕಟ ಸಂಬಂಧ ಸ್ಥಾಪಿಸಿಕೊಂಡು ಬಿಡುತ್ತದೆ, ಎಂದು ಅರಿತಾಗ ಮಾತ್ರ ನನ್ನ ಅಭಿಪ್ರಾಯದ ಕಾಳಜಿ ಅರ್ಥವಾಗಬಲ್ಲದು. ಈ ಚಿತ್ರದ ಪ್ರತಿಗಾಮಿ ಸತ್ವ ತಾಂತ್ರಿಕ ಶ್ರೇಷ್ಠತೆಗಳನ್ನು ತನ್ನ ಈ ಸಾಧನೆಗೆ ಹೇಗೆ ಬಳಸಿಕೊಳ್ಳುತ್ತದೆ ಎಂಬುದು ಅತ್ಯಂತ ಚರಿತಾರ್ಹ. 'ಮಾಫಿಯಾ' ನಾಯಕನೊಬ್ಬನ ಕೃತ್ಯಗಳಿಲ್ಲ ಸದ್ಯದ ವ್ಯವಸ್ಥೆಗೆ ತೋರುವ ಬಂಡಾಯದಂತೆ, ತುಳಿತಕ್ಕೊಳಗಾದ ಎಲ್ಲಾ ವರ್ಗದ ಜನತೆಯ ಅನಿವಾರ್ಯ ಮುಂದಾಳುವಿನಂತೆ, ನಾವು ಸದ್ಯದ ಪರಿಸ್ಥಿತಿಯಲ್ಲಿ ಹಪಹಪಿಸುತ್ತಿರುವ ತತ್ವವೊಂದರ ಹರಿಕಾರನಂತೆ 'ವೇಲು ನಾಯಕರ್' ಎಲ್ಲಾ ಯುವಜನಾಂಗದ ಮನಸ್ಸಿನಲ್ಲಿ ಅಚ್ಚೊತ್ತಿಕೊಂಡಿದ್ದರೆ, ಇದಕ್ಕೆ ಕಾರಣ ವರದರಾಜ್ ಮೊದಲಿಯಾರ್‌ನಂತಹ ವಾಸ್ತವ ವ್ಯಕ್ತಿಯ ಜೀವನವೊಂದೇ ಕಾರಣವಲ್ಲ, ತನ್ನ ನಿರ್ದೇಶನ ಜಾಣ್ಮೆಯನ್ನು ಮಣಿರತ್ನಂ, ಛಾಯಾಗ್ರಹಣದ ಸೂಕ್ಷ್ಮತೆಯನ್ನು ಶ್ರೀರಾಂ, ದಶಕದ ಅತ್ಯುತ್ತಮ ಕಲಾನಿರ್ದೇಶನವನ್ನು ತಂಬಿಯುಚ್ಚ ನಿರ್ವಿಕಾರವಾಗಿ ಈ ವಸ್ತುವಿಗೆ ಧಾರೆಯೆರೆದು, ವೇಲನಾಯಕರ್‌ನನ್ನು ಪ್ರೇಕ್ಷಕರ ಸಂದಿಗ್ಧ ಮನೋಸ್ಥಿತಿಯ ಮುಂದೆ ತಂದು ನಿಲ್ಲಿಸಿರುವುದರಿಂದ ಈ ನಿರ್ದೇಶನ, ಛಾಯಾಗ್ರಹಣ, ಕಲಾನಿರ್ದೇಶನ ಮುಂತಾದ ಶ್ರೇಷ್ಠತೆಯಿಲ್ಲದಿದ್ದರೆ 'ವೇಲುನಾಯಕರ್' ನಾಯಗನ್' (ದಿ ಹೀರೋ) ಆಗುತ್ತಲೇ ಇರಲಿಲ್ಲ. ಎಂದು ಯಾರಿಗೆ ಅರ್ಥವಾಗುವುದಿಲ್ಲವೋ ಅವರಿಗೆ ಈ ಸಿನಿಮಾದ ಅನಿಷ್ಟತೆಕೂಡ ಅಸಂಗತತೆಯಾಗುತ್ತದೆ. ಅವರು 'ಕತೆಯನ್ನ ಬಿಡಿ' ತಾಂತ್ರಿಕ ಶ್ರೇಷ್ಠತೆಯನ್ನಾದರೂ ಮೆಚ್ಚಬೇಡವೇ' ಎಂದು ಕೇಳುತ್ತಾರೆ. ಹೀಗೆ ಹಿಟ್ಲರ್‌ನನು ಯಹೂದಿಯರಿಗಲ್ಲದಿದ್ದರೂ, ಜರ್ಮನರಿಗೆ ಒಳಿತು ಮಾಡಿದ ಶ್ರೇಷ್ಠ ನಾಯಕನಲ್ಲವೇ ಎಂದು ಕೇಳುವುದು ಅಸಂಗತವಲ್ಲವೇ! ಒಂದು ಕೆಟ್ಟ ಹಾಡನ್ನು ಸುಮಧುರವಾಗಿ ಹಾಡಿ, ಒಳ್ಳೆಯ ಹಾಡಿನ ಭ್ರಾಂತು ಮೂಡಿಸುವುದು, ಒಂದು ಒಳ್ಳೇ ಹಾಡನ್ನು ಕೆಟ್ಟದಾಗಿ ಹಾಡಿ, ಜನನಿರಾಕರಣೆ ಮೂಡಿಸುವುದು, ಎರಡೂ ಕಲೆಯನ್ನ—ಹಾಡನ್ನು— ಒಟ್ಟು ಮಾನವ ಕಾಳಜಿಗಳನ್ನು ಕೊಂದಂತೆ ಎಂಬುದು ನನ್ನ ಸ್ಪಷ್ಟ ಅಭಿಪ್ರಾಯ.

ಈ ರೀತಿ ವಿಚಾರಗಳು ನಮ್ಮ ಅಂದರೆ ಮೂರನೇ ವಿಶ್ವದ ಜಗತ್ತಿನಲ್ಲಿ ಹೆಚ್ಚು ತೀಕ್ಷ್ಣತೆಯನ್ನ, ಪರಾಮರ್ಶೆಯನ್ನ ಬಯಸಬೇಕು, ಯಾಕೆಂದರೆ ಮುಂದುವರಿದ ರಾಷ್ಟ್ರಗಳ ಸಾಂಸ್ಕೃತಿಕ ಹಾವಳಿಗಳನ್ನು ನಾವು ಗಮನಿಸದೇ, ಮನೋರಂಜನೆಯ ಹೆಸರಿನಲ್ಲಿ ನಮ ಸಾಂಸ್ಕೃತಿಕ ಅಂಧಃಪಾತಾಳ ಸೇರಬೇಕಾಗುತ್ತದೆ. ನಾನು ಈಚೆಗೆ ನೋಡಿದ ಎರಡು ಚಿತ್ರಗಳು – "ರ್‍ಯಾಂಬೋ–3" ಮತ್ತು "ಲೀವಿಂಗ್ ಡೇ ಲೈಟ್ಸ್" ಈ ದಿಶೆಯಲ್ಲಿ ಹೆಚ್ಚು ಚಿಂತಿಸುವಂತೆ ಮಾಡಿವೆ ಜಗತ್ತಿನ ವಿದ್ಯಮಾನಗಳನ್ನು ನಿಗಾ ಇಟ್ಟು ನೋಡುತ್ತಿರುವವರಿಗೆ ಅಫಘಾನಿಸ್ತಾನದಲ್ಲಿನ ಸೂಕ್ಷ್ಮ ಪರಿಸ್ಥಿತಿ ತಿಳಿದಿದೆ ರಿಬೆಲ್‌ಗಳು ಅಮೇರಿಕೆಯ ಸಹಾಯದಿಂದ, ಜಿನೀವಾ ಒಪ್ಪಂದದ ನಂತರವೂ ದೇಶವನ್ನು ಯುದ್ಧಭೂಮಿಯಾಗಿ ಮುಂದುವರಿಸಿ, ಶಾಂತಿ – ಸ್ವಾಯತ್ತತೆಯನ್ನು ಮರೀಚಿಕೆ ಮಾಡಿವೆ. ಈ ಮುಜಾಹಿದ್ (ಬಂಡುಕೋರರು) ಗಳನ್ನು ಸೂತ್ರವಾಗಿಸಿಕೊಂಡು, ಸಾಮ್ರಾಜ್ಯಶಾಹಿ ತೆರೆಯ ಹಿಂದೆ

ನಗುತ್ತಿದೆ, ಈ ಸಮುದಾಯದಲ್ಲಿ ಅತ್ಯಂತ ಎಚ್ಚರಿಕೆಯಿಂದ ವರ್ತಿಸಬೇಕಾದ ಸಮಯದಲ್ಲಿ ಮೇಲೆ ಹೇಳಿದ ಎರಡು ಚಿತ್ರಗಳು ಹಾಲಿವುಡ್‌ನಿಂದ ಬಂದಿವೆ. "ರ್‍ಯಾಂಬೋ-3" ಯಲ್ಲಿ ರ್‍ಯಾಂಬೋ ಎಂಬ ನಾಯಕ ರಷ್ಯನ್‌ರ ವಿರುದ್ಧ ಏಕಾಂಗಿಯಾಗಿ ಹೋರಾಡಿ (ಮುಜಾಹಿದ್‌ಗಳ ಸಹಾಯದಿಂದ) ಅಮೇರಿಕನ್ ಕೈದಿಯೊಬ್ಬನನ್ನು ಬಿಡಿಸುತ್ತಾನೆ. ಈ ಸಾಹಸದ, ರಷ್ಯನ್‌ರನ್ನು ಅತ್ಯಂತ ಕೆಟ್ಟದಾಗಿ, ಕ್ರೂರಖಳರನ್ನಾಗಿ, ಮುಜಾಹಿದ್‌ಗಳನ್ನು ಸ್ವಾತಂತ್ರ್ಯ ಯೋಧರನ್ನಾಗಿ ತೋರಿಸಲಾಗಿದೆ, ಮತ್ತೆ ಈ ಚಿತ್ರಗಳನ್ನು ಅಫಘಾನ್ ಯೋಧರಿಗೆ ಅರ್ಪಿಸಲಾಗಿದೆ! "ಲಿವಿಂಗ್ ಡೇ ಲೈಟ್" ಎಂಬ ಬಾಂಡ್ ಚಿತ್ರದಲ್ಲಿ ಮುಜಾಹಿದ್‌ಗಳ ಸಹಾಯದಿಂದಲೇ, ಜೇಮ್ಸ್‌ಬಾಂಡ್ ರಷ್ಯನ್ ಸೇನೆಯನ್ನೆದುರಿಸಿ, ತನ್ನ ಪವಿತ್ರಕಾರ್ಯವನ್ನು (ಗೂಢಚಾರನೊಬ್ಬನನ್ನು ಸೆರೆಹಿಡಿಯುವುದು) ಪೂರ್ಣಗೊಳಿಸುತ್ತಾನೆ. ಹೀಗೆ ಯಾವ ಒಂದು ಎಗ್ಗಿಲ್ಲದೇ ಚಾರಿತ್ರಿಕ ಸುಳ್ಳುಗಳನ್ನು ಸಿನಿಮಾಧ್ಯಮದ ಮೂಲಕ ಮೂರನೇ ಜಗತ್ತಿನಲ್ಲಿ ಬಿಕರಿಮಾಡುವ ಯತ್ನಗಳನ್ನು ಉತ್ತಮ ತಾಂತ್ರಿಕತೆ, ಮನೋರಂಜನೆ ದೃಷ್ಟಿಗಳಿಂದ ನೋಡಲಾದೀತೆ? ಒಂದು ಕಡೆ ಜನೀವಾ ಒಪ್ಪಂದಕ್ಕೆ ಸಾಕ್ಷಿಗಳಾಗಿ, ಇನ್ನೊಂದೆಡೆ ಅದನ್ನು ಹಾಳುಗೆಡುವುವ ಸಿನಿಮಾಗಳನ್ನು ಹರಿಯಬಿಡುವ ಅಮೇರಿಕೆಯ ಸಾಂಸ್ಕೃತಿಕ ರಾಜಕೀಯವನ್ನು ಮರೆತುಬಿಡಲಾಗುತ್ತದೆಯೇ? ಜನೀವಾ ಒಪ್ಪಂದವನ್ನು ಮುಕ್ತಕಂಠದಿಂದ ಹೊಗಳುವ ಭಾರತ ಸರ್ಕಾರ, ಇಂತಹ ಸಿನಿಮಾಗಳನ್ನು ಯಾಕೆ ಪ್ರದರ್ಶಿಸಲು ಅನುಮತಿ ಕೊಡುತ್ತಿದೆ? ಸಿನಿಮಾ ಎಂಬ ಮಾಧ್ಯಮದೊಡಗಿನ ನಮ್ಮ ಸಂಬಂಧಗಳನ್ನು ನಾವು ಅರಿಯದಿದ್ದರೇ ಈ ಪ್ರಶ್ನೆಗಳಿಗೆ ಉತ್ತರವೇ ಇರುವುದಿಲ್ಲ. ●

---

ಬೆಂಕಿ :

ಜ್ವಾಲೆಯು ಸುಡುತಿದೆ ಎಂದು
ಆ ಬಾಲೆಗೂ ಗೊತ್ತು
ಆದರೂ ಅದರಲಿ ಏಸಿರಬಹುದೆಂದು
ತಿಳಿಯುವಾ ಗತ್ತು.
ಹಿಂಬಾಲಿಸುವರು ಇವತ್ತು.

ಕ್ಷಣ ಸುಖಕೆ ಮನಸೋತು
ಹೋದರೆ ಹೋಗುವದು
ಅಬಲೆಯಾ ಸೊತ್ತು.

ಮಲ್ಲಿಕಾರ್ಜುನ ಶಿರಗುಪ್ಪಿ,
ಶಿಕ್ಷಕರು, ಸಾಗೇನಹಳ್ಳಿ.

---

Search for truth which is very often forgotten in materiaiistic societies is the main preoccupation of my protagonist.

— KRZYSZTOF ZANUSSI

## ನೆರೆಹೊರೆಯುವರನ್ನು ಪ್ರೀತಿಸಿ :

ಬೂದಿಕುಂಡವಾಗಿ ಈ ಭೂಮಿ
ಹಿಂಚಲಿಸಿ ಗಡಿಯಾರದ ಈ ಮುಳ್ಳು,
ಜೀವಿಗಳೇ ಇರದ ಆ ಕೆಟ್ಟ ದಿನಗಳು
ಈ ಭೂಮಿಗೆಂದೂ ಬಾರದಿರಲಿ

ಅರಳಿ ಮೊಗ್ಗು ಹೂವಾಗಿ
ಜೀವಂತವಿರಲಿ ಜೀವಧಾತು
ಜೇನುಗೂಡುಗಳು ಕಟ್ಟುತಿರಲಿ
ಕಾಡ ಹಸಿರ ನಡುವೆ.

ನಡುಗದೆ ಕನಸುಗಳು
ಅಣು ಚಳಿಗೆ
ಮುದುಡದೆ,
ಕ್ಷಿಪಣಿ ಪೇರಿಕೆಗಳ ನಡುವೆ
ಕಳೆಯುದಿರಲಿ ಅನ್ನದ ಅಗಳು
ಅಣುವಿಕಿರಣ ಪಸರಿಸಿ
ಒಟ್ಟುಗೂಡದಿರಲಿ ಕೆಟ್ಟ ನೆನಪುಗಳ ಸ್ಮಾರಕವಾಗಿ
ತಲುಪುತಿರಲಿ
ಎಂದೂ ತಿಳಿಯಾಗಿ ಸೂರ್ಯಕಿರಣ

ಯಾರ ಒಡನಾಟ ನಿಮಗಿದೆ
ಯಾರಿಗಿದೆ ಈ ವಿಶ್ವ
ಹೆಜ್ಜೆ ಇಡುವ ಮುನ್ನ
ಕ್ಷಣ ಹೊತ್ತು ಯೋಚಿಸು
ಹೆಜ್ಜೆ ಮೀರುವ ಮುನ್ನ
ಇದೆ ಈ ವಿಶ್ವ ನಿನಗೂ
ವಿನಾಶದ ಆ ದಿನದ ನಂತರ
ಏನಿದೆ ನಿನಗಿಲ್ಲಿ
ಯಾರ ಒಡನಾಟ ನಿನಗೆ ಸಿಕ್ಕೀತು ?

— ಅಶೋಕಕುಮಾರ ಕೆ.

# ವಿರೋಧ ಪಕ್ಷಗಳ ಏಕತೆ : ಒಂದು ವಿವೇಚನೆ.

ಪರಶುರಾಮ ಕಲಾಲ್

ನಮ್ಮ ರಾಷ್ಟ್ರವು ಸ್ವಾತಂತ್ರ್ಯ ಗೊಂಡು ನಾಲ್ಕು ದಶಕಗಳನ್ನು ಜೀರ್ಣಿಸಿಕೊಂಡಿದೆ. ಈ ದೀರ್ಘ ಅವಧಿಯಲ್ಲಿ ನಾವುಗಳಿಸಿಕೊಂಡಿದ್ದೇನು ? ಮತ್ತು ಕಳೆದುಕೊಂಡಿದ್ದೇನು ? ನಮ್ಮ ರಾಷ್ಟ್ರದ ಪ್ರಗತಿ ಮತ್ತು ವಿಗತಿಯ ಚಿತ್ರವನ್ನು ಒಂದಿಷ್ಟು ಅವಲೋಕಿಸುವ ಮೂಲಕ ವಿರೋಧ ಪಕ್ಷಗಳ ಏಕತೆ ಕುರಿತು ವಿವೇಚಿಸಲು ಒಂದಿಷ್ಟು ದೀರ್ಘವಾದರೂ ಅಗತ್ಯವೆಂದುಕೊಂಡಿದ್ದೇನೆ

ಸ್ವಾತಂತ್ರ್ಯೋತ್ತರ ಭಾರತವು ಒಳ್ಳೆಯ ಬದುಕಿಗಾಗಿ ದುಡಿಯುವ ಜನತೆಯ ಜೈವಿಕ ಕ್ರಿಯೆ ಅರಳಲು ವಿಶಾಲ ಭೂಮಿಕೆಯನ್ನು ಸಿದ್ಧಪಡಿಸಿಕೊಟ್ಟಿತು. ಮತ್ತು ಅದಕ್ಕೆ ಪೂರಕವಾಗಿ ಅಭಿವೃದ್ಧಿಶೀಲ ಯೋಜನೆಗಳಿಗೆ ತನ್ನನ್ನು ತೆರೆದುಕೊಂಡಿತು ಎಂಬದು ಒಂದರ್ಥದಲ್ಲಿ ನಿಜ.

ಸಾರಿಗೆ ಮತ್ತು ಸಂಪರ್ಕ, ಬೃಹತ್ ಕೈಗಾರಿಕೋದ್ಯಮಗಳು, ಸರ್ಕಾರಿ ಸಾಮ್ಯದಲ್ಲಿನ ದೊಡ್ಡ ಕೈಗಾರಿಕೆಗಳು. ನೀರಾವರಿ ಪ್ರದೇಶಗಳನ್ನು ವಿಸ್ತರಣೆ ಮಾಡುವಲ್ಲಿ. ಅನುಕೂಲಕ ಆಹಾರ ಉತ್ಪಾದನೆಯಲ್ಲಿ ಏರಿಕೆ. ಅಣುಶಕ್ತಿ ಮತ್ತು ಬಾಹ್ಯಾಕಾಶ ತಂತ್ರಜ್ಞಾನದ ರಂಗವನ್ನು ಸಹ ಪ್ರವೇಶಿಸಲಾಗಿದೆ.

ಈ ಪ್ರಗತಿ ಚಿತ್ರ ತುಂಬಾ ಆಕರ್ಷಕವಾಗಿದೆ ನಿಜ, ಆದರೆ ಇದು ಸಮಸ್ಯೆಯ ಅಂಚನ್ನು ಮುಟ್ಟವಲ್ಲಿ ಸೋತಿದೆ ಎಂಬುದು ನಿಜ, ನಮ್ಮೊಂದಿಗೆ ವಿಮೋಚನೆಗೊಂಡ ನಮ್ಮ ನೆರೆ ಹೊರೆ ರಾಷ್ಟ್ರಗಳು ಪ್ರಜಾಸತ್ತೆಯನ್ನು ಹೊಸಕಿ ಹಾಕಿ ಮಿಲ್ಟ್ರಿ ಸರಕಾರಗಳು ತಲೆ ಎತ್ತಿರುವುದನ್ನು ಕಂಡಾಗ ವಿಭಿನ್ನ ಧರ್ಮಗಳಿರುವ ಬಹುಭಾಷೆಯನ್ನೊಳಗೊಂಡ ವೈವಿಧ್ಯಮಯ ಸಂಸ್ಕೃತಿಯ ಹಿನ್ನೆಲೆಗಳಿರುವ 'ಭಾರತ' ತನ್ನ ಐಕ್ಯತೆಯನ್ನು ಉಳಿಸಿಕೊಂಡು ಬರುವುದಕ್ಕೆ ಪ್ರಜಾಸತ್ತೆ ಉಸಿರುಗಟ್ಟುತ್ತಿದ್ದರೂ ಸಾಯದಿರುವುದಕ್ಕೆ ಈ ಪ್ರಗತಿ ಒಂದಿಷ್ಟು ನೆರವಾಗಿದೆ, ಮೂರನೇಯ ಜಗತ್ತಿನ ರಾಷ್ಟ್ರಗಳನ್ನು ಮಾರುಕಟ್ಟೆಗಾಗಿ ನವವಸಾಹತುಶಾಹಿ ರಾಷ್ಟ್ರಗಳನ್ನಾಗಿಸಿಕೊಳ್ಳಲು ದೇಶದೊಳಗೆ ಮತ್ತು ಹೊರಗೆ ದುರ್ಬಲಗೊಳಿಸಲು ಪ್ರಯತ್ನಿಸುತ್ತಿರುವ ಅಮೇರಿಕಾದೇಶದ ಪ್ರಯತ್ನಗಳ ಫಲಗಳೇ ಅದರ ಕೈಗೊಂಬೆಯಾಗಿರುವ ನಮ್ಮ ನೆರೆ ಹೊರೆ ಮಿಲ್ಟ್ರಿ ಸರಕಾರಗಳು, ಇದು ನಮ್ಮ ಸಂಪನ್ಮೂಲಗಳ ಬಹುಪಾಲನ್ನು ರಕ್ಷಣೆ ವ್ಯವಸ್ಥೆಗೆ ಸುರಿಯುವ ಬಿಕ್ಕಟ್ಟನ್ನು ಸೃಷ್ಟಿಸಿದೆ ( ಎರಡೂಕಡೆ ಅಣ್ವಸ್ತ್ರಗಳನ್ನು ಮಾರಲು ಅಮೇರಿಕಾಕ್ಕೆ ಈಗ ಮಾರುಕಟ್ಟೆ ಇದೆ! )

ಸ್ವಾತಂತ್ರ್ಯೋತ್ತರ ಭಾರತದ ಪ್ರಗತಿಚಿತ್ರವಿದು, ಆದರೆ ಭಾರತದ ಜನತೆ ಸ್ವಾತಂತ್ರ್ಯ ಚಳುವಳಿಯ ಮುಂಚೂಣಿಯಲ್ಲಿ 'ರಥ' ಹೂಡಿದ್ದ ನಾಯಕರಿಂದ ಹೆಚ್ಚಿನ ನಿರೀಕ್ಷೆ ಇಟ್ಟುಕೊಂಡಿತ್ತು.

ಭೂಮಿಯ ಸಮಾನ ಹಂಚಿಕೆ, ಜನತೆಯ ಸ್ವಾವಲಂಬನೆಗೆ ಪೂರಕವಾಗಿ ಅಭಿವೃದ್ಧಿ ಶೀಲ ಯೋಜನೆಗಳು ಹುಸಿಯಾದದ್ದು ನಮ್ಮ ವಿಗತಿಯ ಚಿತ್ರದ ಆರಂಭ. ಬ್ರಿಟಿಷರು ಬಿಟ್ಟು ಹೋದ ಕಪ್ಪು ಬೂಟಿನೊಳಗೆ ಕಾಲನ್ನು ತುರುಕಿದ್ದ ಭಾರತದ ಆಳುವ ವರ್ಗ ಈ ಸಿರೀಕ್ಷೆಗಳನ್ನು ಬುಡಮೇಲು ಮಾಡಿತು. ಆಂಧ್ರದ ತೆಲಂಗಾಣ, ಕೇರಳದ ಕಯ್ಯೂರ, ಬಂಗಾಳದ ತೇಭಾಗ್‌ನ ಕೃಷಿಕಾರ್ಮಿಕ ರೈತಾಪಿ ವರ್ಗದ ಭೂಮಿಗಾಗಿ ನಡೆದ ಕ್ರಾಂತಿಕಾರ ಹೋರಾಟಗಳನ್ನು ಬರ್ಬರವಾಗಿ ಸೈನ್ಯವನ್ನು ಬಳಸಿ ತುಳಿಯಲಾಯಿತು. ಈ ಹೋರಾಟಗಳು ಭಾರತದ ಆಳುವ ವರ್ಗದ ನಿಜಸ್ವರೂಪವನ್ನು ಬಯಲಿಗೆಳೆದವು. ಹೋರಾಟದ ಸಾಂದ್ರತೆ ವಿಸ್ತರಿಸುವುದನ್ನು ತಡೆಯಲು 'ಭೂಸುಧಾರಣೆ' ಎಂಬ ಮಾಯದ ಜಿಂಕೆಯನ್ನು ಸೃಷ್ಟಿ ಮಾಡಿ ಪ್ರಗತಿಪರ ಮುಖವಾಡ ಧರಿಸಿಕೊಂಡಿತು. 'ಭೂಸುಧಾರಣೆ' ಈಗ ಕಾಗದದಮೇಲೆ ಕಛೇರಿಯಿಂದ ಕಛೇರಿಗೆ ಮಿಂಚುತ್ತಾಅಲೆದಾಡುತ್ತಿದೆ.

ಇದು ನೆಲಕ್ಕೆ ಬಂಧಿಸಲ್ಪಟ್ಟ ನಮ್ಮ ಜನರ ಕ್ರಿಯಾಶೀಲ ಶಕ್ತಿಯನ್ನು ಹೊರತಂದು ಫ್ಯೂಡಲ್ ಮನೋಭಾವದಿಂದ ಮೆದುಳನ್ನು ಬಿಡಿಸುವದು ಸಾಧ್ಯವಾಗಲೇ ಇಲ್ಲ.

ಭಾರತದ ಆಳುವವರ್ಗ ಭೂಮಾಲೀಕತನವನ್ನು ಉಳಿಸಿಕೊಂಡು ಬಂಡವಾಳಷಾಹಿಯಾಗಿ ಬೆಳೆದು ಬಂದ ಆದರ ಹಿತಾಶಕ್ತಿಯ ಆರ್ಥಿಕ ಯೋಜನೆಗಳು ಬಿಕ್ಕಟ್ಟುಗಳನ್ನು ಸೃಷ್ಟಿಸುವಲ್ಲಿ ಸಾಧ್ಯವಾಗಿ ಬಹುರಾಷ್ಟ್ರೀಯ ಕಂಪನಿಗಳಿಗೆ ಮುಕ್ತವಾಗಿ ಬಾಗಿಲು ತೆರೆಯಲು ಅವಕಾಶ ಕಲ್ಪಿಸಿಕೊಟ್ಟು ನಮ್ಮ ಆರ್ಥಿಕ ವ್ಯವಸ್ಥೆಯನ್ನು ಖಾಯಂ ಆಗಿ 'ಊನ' ಗೊಳಿಸಲಾಗಿದೆ.

ಈಗ ಭಾರತ ಒಂದು ಅಸಂಗತ ನಾಟಕವಾಗಿದೆ. ಅನೇಕ ಸಣ್ಣ ಕೈಗಾರಿಕೆಗಳು ರೋಗಗ್ರಸ್ಥವಾಗಿವೆ. ಸರ್ಕಾರಿಸಾಮ್ಯಗಳ ಕೈಗಾರಿಕೆಗಳು ಖಾಸಿಗೆಯವರ ತೆಕ್ಕೆಗೆ ಸರಿಯು ತ್ತಿದ್ದಾವೆ. ಗುಡಿಕೈಗಾರಿಕೆಗಳು ನಾಶದ ಅಂಚಿನಲ್ಲಿವೆ. ವಿದೇಶಿಸಾಲದಹೊರೆಯಂತೂ ಪ್ರತಿ ವರ್ಷವೂ ಏರುತ್ತಿದ್ದು ನಮ್ಮ ಜನಗಳ ಕುತ್ತಿಗೆ ಅಮುಕುತ್ತಿದೆ. ಹಳ್ಳಿಗಳು ಪಟ್ಟಣದ ಕಾರ್ಖಾನೆಯ ಹೊಟ್ಟೆಸೇರಿ ಬರಡಾಗುತ್ತಿದ್ದರೆ, ಪಟ್ಟಣಗಳು ಹೊಟ್ಟೆ ಬಿರಿಯುವಂತೆ ತುಂಬಿಕೊಂಡು ಕೊಳಚೆಗಳನ್ನು ಹಂದಿಮರಿಯಂತೆ ಹಾಕುತ್ತಿದೆ. ವಿಲಾಸ ಬದುಕಿನ ವಸ್ತುಗಳು 'ಮಾರುಕಟ್ಟೆ'ಯನ್ನು ಆಕ್ರಮಿಸಿವೆ ಜನಸಾಮಾನ್ಯರ ಅವಶ್ಯಕತೆಗಳು ಬೀದಿಯಲ್ಲಿ ಕೊಳೆಯುತ್ತಿವೆ. ಮಾರುಕಟ್ಟೆ ಇಲ್ಲ ಅವಕ್ಕೆ.

ಬಟ್ಟೆಗಿರಣಿಗಳು ಮುಚ್ಚುತ್ತಿರುವ ಅರ್ಥ ಹೆಚ್ಚು ಉತ್ಪಾದನೆ ಹೊಂದಿ ಎಲ್ಲಾ ಜನರಿಗೂ ಬಟ್ಟೆಗಳು ಸಾಕಷ್ಟಿವೆ ಎನ್ನುವದಲ್ಲ, ಸಾಮಾನ್ಯ ಜನತೆಯಲ್ಲಿ 'ಕೊಳ್ಳುವಶಕ್ತಿ' ಕಳೆದುಹೋಗಿದೆ ಎನ್ನುವದು.

ಈ ವೈಫಲ್ಯತೆ, ಅಸಮಾನತೆ, ದಾರಿದ್ರ್ಯತೆಯನ್ನು ಕೋಮು, ಭಾಷಾಂಧತೆ, ಜಾತಿಯ ಮುಖವಾಡಗಳು ಬಳಸಿಕೊಳ್ಳುತ್ತವೆ. ಪ್ರತ್ಯೇಕತೆಯ ಬೀಜ ಚಿಗುರೊಡೆದು ಮನುಷ್ಯ ಮನುಷ್ಯರ ನಡುವೆ ಲಂಟಾನದ ಪೊದೆಯನ್ನು ನಿರ್ಮಿಸುತ್ತದೆ. ವಿದೇಶಿ ಶಕ್ತಿಗಳು ನೀರೆರೆದು ಪೋಷಿಸಿ ಲಾಭಗಿಟ್ಟಿಸಿಕೊಳ್ಳುತ್ತವೆ. ನಮ್ಮ ಜನತ ಮಿದುಳುಗಳಿಗೆ ಈಗ ಈ ಗೆದ್ದಲು ಹುಳಗಳು ಅಂಟಿಕೊಂಡಿವೆ. ಅಂತರರಾಷ್ಟ್ರೀಯ ಮತ್ತು ರಾಷ್ಟ್ರೀಯ 'ಮಾರುಕಟ್ಟೆ'ಗಳ ಈ ವಿದ್ಯಮಾನಗಳು ನಮ್ಮ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಮೌಲ್ಯಗಳ ಅಧಃಪತನದ ತಳಹದಿಯಾಗಿದೆ. ಈ ಕಣ್ಣೋಟದಲ್ಲಿ ನಮ್ಮ ದೇಶದ ಸಧ್ಯದ ಈ ಪರಿಸ್ಥಿತಿಯಲ್ಲಿ ವಿರೋಧಪಕ್ಷಗಳ ಐಕ್ಯತೆ ಕುರಿತು ವಿವೇಚಿಸುವದು ಅರ್ಥಪೂರ್ಣ ಎಂದು ನನ್ನ ಭಾವನೆ.

ಪ್ರತಿಯೊಂದು ರಾಜಕೀಯ ಪಕ್ಷಗಳು ಒಂದು ಆರ್ಥಿಕ ಹಿನ್ನೆಲೆ ಹೊಂದಿವೆ. ಮತ್ತು ಆಯಾವರ್ಗದ ಹಿತಾಶಕ್ತಿಯನ್ನು ಬಿಂಬಿಸುತ್ತವೆ, ರಕ್ಷಿಸುತ್ತವೆ ಕೂಡಾ, ಅಂದರೆ 'ರಾಜಕೀಯ ಪಕ್ಷಗಳು' ಸಮಾಜದ ವಿವಿಧ ವರ್ಗದ ಹಿತಾಶಕ್ತಿಯ ಪ್ರತಿರೂಪಗಳು.

ಉತ್ಪಾದನ ಸಾಧನಗಳನ್ನು ಕೈಯಲ್ಲಿಟ್ಟುಕೊಂಡು 'ಮಾರುಕಟ್ಟೆ' ನಿಯಂತ್ರಿಸುವ ರಾಷ್ಟ್ರೀಯ ಬಂಡವಾಳದಾರರು ತಮ್ಮ ಆರ್ಥಿಕ ನೀತಿಗನುಸಾರವಾಗಿ 'ರಾಜಕೀಯ ಪಾಲಿಸಿ'ಯನ್ನು ಹೊಂದಿರಬೇಕಾಗಿರುತ್ತದೆ, ಸಣ್ಣ ಬಂಡವಾಳದಾರರು ಇವರೊಡನೆ ಪೈಪೋಟಿ ನಡೆಸಬೇಕಾಗುತ್ತದೆ. ಬಹುರಾಷ್ಟ್ರೀಯ ಕಂಪನಿಗಳು ಸಹಾಯದ ಹೆಸರಲ್ಲಿ ಒಳನುಗ್ಗಿ ತಳಭದ್ರ ಮಾಡಿಕೊಳ್ಳಲು 'ಪರಿಸರ' ನಿರ್ಮಿಸಬೇಕಾಗುತ್ತದೆ.

ಈ ಬಂಡವಾಳಗಾರರ ವೈರುಧ್ಯಗಳು ಈ ವರ್ಗಗಳನ್ನು ಪ್ರತಿನಿಧಿಸುವ ರಾಜಕೀಯ ಪಕ್ಷಗಳ ವೈರುಧ್ಯಗಳಾಗಿ ಪ್ರತಿಬಿಂಬಿತವಾಗುತ್ತದೆ. 'ಬಲ' ಎಂದು ಗುರುತಿಸಲ್ಪಡುವ ಈ ಪಕ್ಷಗಳ ನೀತಿ ಸಂಹಿತೆ ಆ ವರ್ಗಗಳ ಹಿತಾಸಕ್ತಿಯಂತೆ ಸಂದರ್ಭಸಾಧಕತನವೇ ಆಗಿರುತ್ತವೆ ಊಳಿಗಮಾನ್ಯ ಸಮಾಜದ ಅವಶೇಷಗಳನ್ನು ಹೊಟ್ಟೆಯಲ್ಲಿಟ್ಟುಕೊಂಡು ಬಂಡವಾಳಶಾಹಿ ಬಟ್ಟೆಗಳನ್ನು ಧರಿಸಿರುವ ಈ ರಾಜಕೀಯ ಪಕ್ಷಗಳ 'ವ್ಯಕ್ತಿ ಪ್ರಾಧಾನ್ಯತೆ'ಯಮೇಲೆನಿಂತಿರುತ್ತವೆ 'ಪ್ರಭಾವ ಶಾಲಿ ವ್ಯಕ್ತಿ' ರಾಜಕೀಯ ಪಕ್ಷವಾಗಿರುತ್ತಾನೆ ಆತನ ಹಿಂಬಾಲಕರು ಅಥವಾ ಬೆಂಬಲಿಗರು ಸದಸ್ಯರುಗಳಾಗಿರುತ್ತಾರೆ ಪ್ರಭಾವಶಾಲಿ ವ್ಯಕ್ತಿಯೆಂದರೇ ಖಾಸಗಿ ಆಸ್ತಿಯ ಮಾಲೀಕ, ಜಮೀನ್ದಾರ, ಜನಪ್ರಿಯನಟ, ಮಾಜೀರಾಜ, ಉಂಡು ಬಿಟ್ಟ ರಾಜಕಾರಣಿ ಇತ್ಯಾದಿ. ತಮಿಳುನಾಡಿನಲ್ಲಿ ಬ್ರಾಹ್ಮಣ್ಯ ವಿರೋಧಿ ಪೆರಿಯಾರ್‌ನ ನಾಸ್ತಿಕ ದ್ರಾವಿಡ ಚಳುವಳಿಯ 'ಶಿಶು', ದ್ರಾವಿಡ ಕಳಗಂ ಪಕ್ಷವು ಕಾಳಿಕಾಂಬೆಗೆ ಚಿನ್ನದ ಕತ್ತಿ ಕೊಡುವ 'ದೇವತಾನಿಷ್ಠೆ' ಸಿನಿಮಾ ನಟ ಎಂ. ಜಿ. ರಾಮಚಂದ್ರನ್‌ನಲ್ಲಿ ಮೂರ್ತಿಗೊಂಡು 'ಬ್ರಾಹ್ಮಣ ಜಾನಕಿ' ಮುಖ್ಯಮಂತ್ರಿಯಾಗುವ ಹಂತಕ್ಕೆ ಮುನ್ನಡೆದು ದ್ರಾವಿಡ ಕಳಗಂನ ಮೂಲ ಆಶಯವೇ 'ನಾಪತ್ತೆ'ಯಾಗಿದೆ ಇಲ್ಲಿ ಸದಸ್ಯರುಗಳು 'ವ್ಯಕ್ತಿಗೆ' ಮಾತ್ರ ಬದ್ಧರು; ತಮ್ಮ ರಾಜಕೀಯ ಸಿದ್ಧಾಂತಕ್ಕಲ್ಲ.

ಈ ಪ್ರಭಾವಶಾಲಿ ವ್ಯಕ್ತಿ ಪಕ್ಷಾಂತರ ಮಾಡಿದರೆ ಪಕ್ಷ ಗಣನೀಯ ಪ್ರಮಾಣದಲ್ಲಿ ಹೋಳಾಗಿ ಬಿಡಬಹುದು ಇಲ್ಲವೇ ಇನ್ನೊಬ್ಬ ವ್ಯಕ್ತಿಯ 'ಪ್ರಭಾವ'ಕ್ಕೊಳಪಡದೆ ಸದಸ್ಯರುಗಳ ಸಮೂಹವೇ ಆತನೆಡೆ ಸರಿಯಬಹುದು (ಪ್ರಭಾವಕ್ಕೆ ಜಾತಿ, ಅಧಿಕಾರ, ಹಣದ ಥೈಲಿ ಇತ್ಯಾದಿ ವ್ಯಾಪಾರವಿದೆ) ಅಲ್ಪಸ್ವಲ್ಪ ಅಂತರವಿರುವ ಬಲ ಪಕ್ಷಗಳಲ್ಲಿ ಪಕ್ಷಾಂತರ ಅನಿವಾರ್ಯ. ಇಲ್ಲಿ ಸದಸ್ಯರುಗಳು ಸರಕುಗಳು ಮಾತ್ರ ಕೊಂಡುಕೊಳ್ಳುವ 'ಧನಿ' ಕೊಂಡುಕೊಳ್ಳುತ್ತಾನೆ ತಾಕತ್ತಿದ್ದರೆ ನಿಭಾಯಿಸಿ ಕೊಳ್ಳುತ್ತಾನೆ. ಅಷ್ಟೇ ಅಲ್ಲ, ತಮ್ಮ ಪಕ್ಷಗಳಲ್ಲಿಯೇ ಇನ್ನೊಬ್ಬ ಪ್ರಭಾವಶಾಲಿ ವ್ಯಕ್ತಿ ಹೊರಬರದಂತೆ ಪ್ರತಿಯೊಬ್ಬ ನಾಯಕನು ಕಾಲುಹಿಡಿದು ಕೆಳಕ್ಕೆ ಎಳೆಯುವ ಅಂತಃಪುರ ರಾಜಕೀಯದಲ್ಲಿರುತ್ತಾರೆ, ಆದ್ದರಿಂದಲೇ ಸ್ವಾತಂತ್ರ್ಯೋತ್ತರದ ನಂತರ ಯಾವ ಬಲಪಕ್ಷಗಳಲ್ಲಿಯೂ ಆಂತರಿಕ ಚುನಾವಣೆಗಳು ನಡೆದಿಲ್ಲ, ಬದಲು ಹೈಕಮಾಂಡ್‌ಗಳು ಸೃಷ್ಟಿಯಾಗಿ ಮೇಲಿನಿಂದ ನಾಯಕತ್ವವನ್ನು ಹೇರುವುದೇ ಆಗಿದೆ, ಅಧಿಕಾರಕ್ಕಾಗಿ ನಡೆಯುವ ಬಹಿರಂಗ ಕಿತ್ತಾಟಗಳು, ಬಂಡುಕೋರರ ಬಣಗಳು ಪ್ರತಿ ನಾಯಕನ ಅಸ್ತಿತ್ವದ ಪ್ರಶ್ನೆಯ ಹೋರಾಟವೇ ಆಗಿರುತ್ತದೆ.

ರಾಷ್ಟ್ರೀಯ ಪಕ್ಷಗಳು ಎಂಬ ಹೆಗ್ಗಳಿಕೆಯಿಂದ ಪ್ರಾದೇಶಿಕ ಪಕ್ಷಗಳನ್ನು ಟೀಕಿಸುವ ಈ ಪಕ್ಷಗಳು ಆಯಾ ರಾಜ್ಯದ ಮಣ್ಣಿನವಾದ, ಬಹುಸಂಖ್ಯಾತ ಮೇಲುಜಾತಿ, ಭಾಷಾಂಧತೆಯೊಂದಿಗೆ ಮಿಳಿತವಾಗಿ 'ರಾಷ್ಟ್ರೀಯತೆಯ' ಬಣ್ಣದ ತಗಡಿನ ತುತ್ತೂರಿ ಊದುತ್ತಿರುತ್ತವೆ ರಾಜಸ್ಥಾನದ 'ಸತಿ' ಪ್ರಶ್ನೆಯನ್ನೇ ಉದಾಹರಣೆಯಾಗಿ ನೋಡಿ, ಸತಿ ಮಾತೆ ಗುಡಿ ಕಟ್ಟಿಸಲು ಮುಗಿಯಬಿದ್ದ ಅಲ್ಲಿಯ ಬಲ ಪಕ್ಷಗಳು ರಜಪೂತರ ಮತಾಂಧತೆಯನ್ನು ಹೊಂದಿರುವುದಷ್ಟೇ ಅಲ್ಲ ಆ ಪಕ್ಷದ ಕಾರ್ಯಕ್ರಮವನ್ನಾಗಿ ನಿಯೋಜಿಸಿಕೊಂಡಿವೆ. ನಮ್ಮ ಪಾರ್ಲಿಮೆಂಟರಿ ವ್ಯವಸ್ಥೆಯಲ್ಲಿ ಅಧಿಕಾರವನ್ನು ಹಿಡಿಯಲು ಎಂತಹ ಸಂದರ್ಭ ಸಾಧಕತನವನ್ನಾದರೂ ಬಳಸಿಕೊಳ್ಳಬೇಕು ಎಂದು ಈ ಪಕ್ಷಗಳ ನಿಶ್ಚಯಿಸುವಿಕೆ ಆ ಪಕ್ಷಗಳ ಆರ್ಥಿಕ ಹಿತಾಸಕ್ತಿಯಂತೆ ಆಗಿದೆ.

ಪಂಜಾಬ್ ಸಮಸ್ಯೆಯನ್ನು ಹುಟ್ಟಿಸಬಹುದು, ಕಡಿದು ಹಾಕಿ ಕಾಂಡಕ್ಕೆ ನೀರುಹಾಕುತ್ತಾ ಜೀವಂತವಾಗಿ ಇಡಬಹುದು ಜನ ದಿನವೂ ಕೊಲೆಯಾಗುತ್ತಿದ್ದಾರಲ್ಲಾ ? ಸತ್ತವರು ಕೇವಲ ನಮ್ಮ ನಿಮ್ಮಂತಹ ಸಾಮಾನ್ಯ ಜನರು ! ರಾಮಜನ್ಮಭೂಮಿ /ಬಾಬ್ರಿ ಮಸೀದಿ ವಿವಾದವನ್ನು ಕೆರಳಿಸಿ ಒಡೆದುಕೋಮುಗಳಿಗೆ ಕಾರಣವಾಗಿದ್ದು ರಾಷ್ಟ್ರೀಯ ಸಮಗ್ರತೆಗೆ ಧಕ್ಕೆಯಲ್ಲವೆ ? ಶರಿಯಾತ್ ಬಗ್ಗೆ ಮಾನವೀಯ ತೀರ್ಪುಕೊಟ್ಟ ನ್ಯಾಯಾಂಗವನ್ನು ಧಿಕ್ಕರಿಸಿ ಮುಸ್ಲಿಂ ಮೂಲಭೂತವಾದಿಗಳಿಗೆ ತೃಪ್ತಿಪಡಿಸಿದ್ದು ಸರಿಯೋ ? ನೋಡಿ ನಮ್ಮದು ಜಾತ್ಯತೀತ ರಾಷ್ಟ್ರ ಎಲ್ಲಾ ಜಾತಿ, ಕೋಮು ಧರ್ಮಗಳಿಗೆ ಎಲ್ಲಾ ರೀತಿಯ ಸ್ವಾತಂತ್ರ್ಯವನ್ನು ಕೊಡಬೇಕಾಗುತ್ತದೆ ಈ ಸುಂದರ ಪದ ಪುಂಜಗಳ ಹಿಂದೆ ಕೇವಲ ಅಧಿಕಾರದ ಆಸೆಯೊಂದೇ ಅಲ್ಲ, ಒಂದು ವ್ಯವಸ್ಥೆ ಇದೆ ಅದಕ್ಕೊಂದು ಆರ್ಥಿಕ ಹಿತಾಸಕ್ತಿಯು ಮುಖವಿದೆ. ಎಂಬುದನ್ನು ಅರ್ಥ ಮಾಡಿಕೊಳ್ಳದಿದ್ದರೆ ನಾವು ಸಂಧರ್ಭಸಾಧಕ ರಾಜಕಾರಣದ ದಾಳಗಳಾಗಿ ಬಿಡುವ ಸಾಧ್ಯತೆ ಇದೆ.

(ಮುಂದಿನ ಸಂಚಿಕೆಗೆ)

# ಹಳೆಯುಪಳೆಯು ಮುಖಗಳು.

□ ಟಿ. ಎಸ್. ಶ್ರೀನಿವಾಸನ್.

ನಮ್ಮ ಹೊಸಪೇಟೆಯಲ್ಲಿ ಬಸ್ ನಿಲ್ದಾಣದ ಹತ್ತಿರವೇ ಒಂದು ಪುಟ್ಟ ಸ್ಟೇಷನರಿ ಅಂಗಡಿ ಇದೆ. ಅದರ ಬಹಳಷ್ಟು ಅಟ್ಟಗಳು ಖಾಲಿ, ಖಾಲಿ ಕಣ್ಣಿಗೆ ರಾಚುತ್ತವೆ. ಹಲವು ಬ್ರಾಂಡ್ ಸಬ್ಬಾಟಂ ಸೆಲ್‌ಗಳು, ಪೆನ್‌ಗಳು, ಹಾಳೆಗಳು, ಮಸಿಕುಡಿಕೆ, ಬಿಸ್ಕೇಟ್ ಪೆಪ್ಪರ್ ಮಿಂಟ್ ಡಬ್ಬಿಗಳು ಇತ್ಯಾದಿಗಳು ಅಲ್ಲಲ್ಲಿ ಹರಡಿಕೊಂಡಿವೆ ಅವಸಾನದ ಹಂತದಲ್ಲಿದೆ ಎನ್ನಬಹುದಾದ, ಆ ಅಂಗಡಿಯಲ್ಲಿ ಸದಾ ಒಬ್ಬ ವೃದ್ಧರು ಕುಳಿತಿರುತ್ತಾರೆ. ಎಪ್ಪತ್ತರ ಆಜುಬಾಜಿನಲ್ಲಿದ್ದೀತು ಅವರ ವಯಸ್ಸು, ಕಚ್ಚೆಪಂಚೆಯುಟ್ಟು ಹತ್ತಿಯ ಅಂಗಿ (ಕೆಲವು ಬಾರಿ ಹರಿದು ಹೋಗಿರುವುದನ್ನು, ತ್ಯಾಪೆಹಾಕಿರುವುದನ್ನು ಕಂಡಿದ್ದೇನೆ.) ತೊಟ್ಟು ಅವರು ಆ ಅಂಗಡಿಯ ದೀನಸ್ಥಿತಿಯನ್ನೇ ಪ್ರತಿನಿಧಿಸುತ್ತಾರೆ.

ನಾನು ಅವರ ಬಳಿ ಹೋಗಿ ಎರಡು ಡಜನ್ ಬಿಳಿ ಹಾಳೆ ಕೊಳ್ಳುತ್ತೇನೆ. ಮೂರು ಮೂವತ್ತು ಸಾರ್ ಎನ್ನುತ್ತಾರೆ ಅವರು, ನಾನು ಹತ್ತು ರೂಪಾಯಿ ನೋಟೊಂದನ್ನು ಅವರ ಕೈಯಲ್ಲಿಡುತ್ತೇನೆ (ಉಳಿದ ಕಡೆಗಿಂತಲೂ ದರ ತುಂಬಾ ಕಡಿಮೆ ಎನಿಸುತ್ತದೆ.) "ಚಿಲ್ಲರೆ ಇಲ್ಲ ಸಾರ್ ಇಲ್ಲೇ ಹೋಗಿ ತರುತ್ತೇನೆ, ಅಥವಾ ನಿಮಗೆ ನಮ್ಮಲ್ಲಿ ಮತ್ತೇನಾದರೂ ಕೊಳ್ಳುವುದು ಇದೆಯೇ?" ಅಲ್ಲಿರುವ ಕೆಲವೇ ವಸ್ತುಗಳಲ್ಲಿ ನಾನು ಯಾವುದನ್ನು ಕೊಳ್ಳಬಹುದೆಂದು ನೋಡುತ್ತೇನೆ. ನಿಪ್ಪೋ ಶೆಲ್‌ಗಳನ್ನು ಕೇಳುತ್ತೇನೆ, ಅವು ಸರಿ ಇಲ್ಲ ಸಾರ್ ಶಾಖಕ್ಕೆ 'ಪವರ್' ಕಳೆದುಕೊಂಡಿರಬಹುದು, ಸರಿ, ನಿರ್ಮಾ ಸೋಪುಗಳು ಅಲ್ಲಿವೆಯಾ ಅವನ್ನೇ ನಾಲ್ಕು ಕೊಡಿ, ಅವು ನಿರ್ಮಾ ಅಲ್ಲ ಸಾರ್ ನಯನಾ ಅಂತ ಸುಮಾರು ಕ್ವಾಲಿಟಿ ನಾನು ಚಿಲ್ಲರೆ ತಂದುಕೊಡುತ್ತೇನೆ ಬಿಡಿ' ಆತ ಬೇರೆ ಅಂಗಡಿಗೆ ಹೋಗಿ ಚಿಲ್ಲರೆ ತಂದು ಕೊಡುತ್ತಾರೆ.

ಇದೆಲ್ಲಾ ಹೇಳುವುದಕ್ಕೆ ಕಾರಣ ಇದೆ, ವ್ಯಾಪಾರದ ಕನಿಷ್ಠ ನೀತಿ ಸಂಹಿತೆಗಳನ್ನೆಲ್ಲಾ ಸ್ಪರ್ಧೆಯ ಹೆಸರಲ್ಲಿ ಗಾಳಿಗೆ ತೂರಿರುವ, ಡೈನಮಿಸಮ್, ಡಿಪ್ಲೋಮಸಿಗಳ ಭಂಡತನದಲ್ಲಿ ತಮ್ಮತನವನ್ನೇ ಕಳೆದುಕೊಂಡು ಹಲ್ಕಿರಿದು ಓಲೈಸಿಕೊಳ್ಳುವುದರಲ್ಲಿಯೇ ತಮ್ಮ ಜೀವನ ವಿಧಾನವಾಗಿಸಿಕೊಂಡ ಇಂದಿನ ಭ್ರಷ್ಟ ಜಗತ್ತಿನಲ್ಲಿ ಶುದ್ಧವಾಗಿರುವುದು ಆಗದ ಮಾತು ಎನ್ನುತ್ತಲೇ ಮಹಾಭ್ರಷ್ಟರಾಗಿ ಮೆರೆಯುತ್ತಿರುವ, ಈ ತುಟ್ಟಿಕಾಲದಲ್ಲಿ ಬರೀ ಸಂಬಳದಲ್ಲಿ ಸಂಸಾರ ನಡೆಸುವುದು ದುಸ್ತರ ಎಂದು ಹಲುಬುತ್ತಲೇ ಗಿಂಬಳಕ್ಕಾಗಿ ಎಂಜಲು ಸುರಿಸುತ್ತಿರುವ ಇವತ್ತಿನ ಜಗತ್ತಿನಲ್ಲಿ ನಮ್ಮ ಈ ವೃದ್ಧರು ಪಳಿಯುಳಿಕೆಯೋಪಾದಿಯಲ್ಲಿ ಜೀವಿಸುತ್ತಿರುವುದು ತುಂಬಾ ನೋವುಂಟು ಮಾಡುತ್ತದೆ. ತಮ್ಮ ವ್ಯಾಪಾರ ಅವಸಾನ ಹೊಂದುತ್ತಿದ್ದರೂ ಇವರು ವೃತ್ತಿನಿಯಮವನ್ನು ಮೀರುತ್ತಿಲ್ಲ. ಅವರ ದಯನೀಯ ಆರ್ಥಿಕಸ್ಥಿತಿ ಅವರನ್ನು

ಸಾಮಾಜಿಕತೆಗೆ, ಮಾನವೀಯತೆಗೆ, ಸ್ವಾತಂತ್ರ್ಯಕ್ಕೆ ಎರವಾಗಿದ್ದ. ತಮ್ಮ ಅಸ್ತಿತ್ವಕ್ಕೆ ಕುತ್ತು ಬರುವಂತಹ ಸಮಯದಲ್ಲೂ ಈ ತೆರನ ಜನ ತಾವು ನಂಬಿದ ಮೌಲ್ಯಗಳಿಗೆ ಅಂಟಿಕೊಳ್ಳುತ್ತಾರೆ

ಇಂತಹ ಮಹನೀಯರನ್ನು ಕಂಡಾಗಲೆಲ್ಲ ನನಗೆ 'ಮೋಹನದಾಸ ಗಾಂಧಿ' ತೀವ್ರವಾಗಿ ಕಾಡುತ್ತಾನೆ. ಈತ ನನಗೆ ಸ್ವಾತಂತ್ರ್ಯಗಳಿಸಿಕೊಟ್ಟ ಮಹಾತ್ಮನಿಗಿಂತ ಹೆಚ್ಚಾಗಿ ಒಬ್ಬ ಸರಳ ಸುಸಂಸ್ಕೃತ ಮಾನವತಾವಾದಿಯಾಗಿ ಮುಖ್ಯನಾಗಿದ್ದಾನೆ (ಸಂಸ್ಕೃತಿ ಒಂದು ಧನಾತ್ಮಕ ಗುಣವೆಂದೇ ನನ್ನ ಅನಿಸಿಕೆ, ನಿಷ್ಠೆ ಇದ್ದವನಿಗೆ ಮಾತ್ರ ಸಂಸ್ಕೃತಿ ಸಾಧ್ಯ). ಈತನಿಗೆ ನಾವು ಪ್ರಗತಿಗಾಮಿ ಅಥವಾ ಪ್ರತಿಗಾಮಿ ಎಂದೋ ಅಥವಾ ಎಡ ಇಲ್ಲವೇ ಬಲಪಂಥೀಯನೆಂದೋ ಹಣೆಪಟ್ಟಿ ಹಚ್ಚುವುದು ಸಮಂಜಸವಾಗಲಾರದು. ಇಂಗ್ಲೆಂಡಿನಲ್ಲಿ ಓದುವಾಗ ತಾನು ರೂಢಿಸಿಕೊಂಡ 'ಇಂಗ್ಲೀಷ್ ಜಂಟಲ್‌ಮ್ಯಾನ್' ನ ಶೋಕಿಗಳನ್ನೆಲ್ಲಾ ನಿರಾಸಕ್ತಿ ತೊರೆದು ತುಂಡುಪಂಚೆಯನ್ನೇ ತನ್ನ ವಸ್ತ್ರವಾಗಿಸಿಕೊಂಡು ಪಾಯಿಖಾನೆಗಳನ್ನು ಸ್ವಚ್ಛಗೊಳಿಸುವ ಮೂಲಕ ಶ್ರಮದ ಹಿರಿಮೆಯನ್ನು ಎತ್ತಿಹಿಡಿದು ತನ್ನ ವಸ್ತ್ರಕ್ಕೆ ಅವಶ್ಯವಾದ ನೂಲನ್ನು ತಾನೇ ನೇಯುವ ಮೂಲಕ ಬಂಡವಾಳಶಾಹಿಯನ್ನು ವಿರೋಧಿಸಿದ ಈತ ನಿಜವಾದ ಅರ್ಥದಲ್ಲಿ ಎಡಪಂಥೀಯನೇ ಆಗಿದ್ದ, ಆದರೂ ಈತ ನಿಷ್ಠ ಧಾರ್ಮಿಕ ವ್ಯಕ್ತಿಯಾಗಿದ್ದ

ಬ್ರಿಟೀಷ್ ಸಾಮ್ರಾಜ್ಯಶಾಹಿಯ ಮತ್ತು ತನ್ನ ಶತ್ರುವಿನ ಹಿಂಸೆ, ಕ್ರೂರತೆಗಳ ವಿರುದ್ಧ ಆತನಾಡಿದ ನೈತಿಕ ಸಮರಕ್ಕೆ ಬೇಕಾದ ಮನೋಬಲ ಆತನ ತೀವ್ರಧಾರ್ಮಿಕ ಕಾಳಜಿಯ ಕೊಡುಗೆಯಿದ್ದಿರಬಹುದೆಂದು ತೋರುತ್ತದೆ, (ಹಾಗೆಂದು ಆತನ ಧಾರ್ಮಿಕ ನಂಬುಗೆಗಳು ನಿಜ ಎಂದು ನಾನು ಹೇಳುತ್ತಿಲ್ಲ, ಆದರೆ ಆ ನಂಬುಗೆಗಳೇ ವ್ಯಕ್ತಿಯ ಬದುಕನ್ನು ಹೆಚ್ಚು ಪ್ರೇಮಮಯವಾಗಿಸಬಹುದಾದರೆ, ಆತನಲ್ಲಿ ನೈತಿಕ ಸ್ಥೈರ್ಯವನ್ನು ತುಂಬಬಹುದಾದರೆ, ಅವು ತಿರಸ್ಕಾರ ಅರ್ಹವಲ್ಲವೆಂದೇ ನನ್ನ ಅನಿಸಿಕೆ.) ಹಿಂದೂಧರ್ಮದಲ್ಲಿನ ಆತನ ನಂಬಿಕೆ ಇತರ ಧರ್ಮೀಯರನ್ನು ಪ್ರೀತಿಸುವಲ್ಲಿ ಅಡ್ಡಿಯಾಗಲಿಲ್ಲ. ಇಂದು ಗಾಂಧೀಜಿಯ ಬಗ್ಗೆ ಹಗುರಾಗಿ ಮಾತಾಡುವ, ಖಂಡಿಸುವ ಆತನ ದೃಷ್ಟಿಕೋನ ಇಂದಿನ ಜಗತ್ತಿಗೆ ಅಸಂಗತ ಎಂದು ವಾದಿಸುವ ಜನರನ್ನು ಕಂಡು ಕೆಡುಕೆನಿಸುತ್ತದೆ. ಎಂದಿನವರೆಗೂ ಶಾಂತಿ, ಸಮೃದ್ಧಿ ಸಮತೆ ನಮ್ಮ ಬದುಕಿನ ಗುರಿಯಾಗಿರುತ್ತದೋ ಅಂದಿನವರೆಗೂ ಗಾಂಧೀಜಿ ನಮಗೆ ಸುಸಂಗತವಾಗಿರುತ್ತಾನೆ. ಇತರರು ಭ್ರಷ್ಟರಾಗಿದ್ದಾರೆಂದು ತಾವು ಭ್ರಷ್ಟರಾಗುವ ಜನರಿಗೆ ಇತರರ ತಪ್ಪುಗಳಿಗಾಗಿ ತನ್ನನ್ನು ತಾನು ಶಿಕ್ಷಿಸಿಕೊಳ್ಳುತ್ತಿದ್ದ ಗಾಂಧಿ ಅಸಂಗತವೆನಿಸಿಯಾನು. ಜನರ ಧಾರ್ಮಿಕ ಭಾವನೆಗಳನ್ನು ಎತ್ತಿಕಟ್ಟಿ ಮಿರಜ್, ಅಹಮದಾಬಾದ್ ಗಲಭೆಗಳನ್ನು ಸೃಷ್ಟಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಭ್ರಷ್ಟ ರಾಜಕಾರಣಿಗಳಿಗೆ, ದೇಶವಿಭಜನೆಯ ಸಮಯದ ಕೋಮುದಳ್ಳುರಿಯ ನಟ್ಟನಡುವೆ ಶಾಂತಿ ಪ್ರತಿಪಾದಿಸಿದ ಗಾಂಧಿ ಅನುಪಯುಕ್ತವಾದಾನು.

ಗುರಿ ಎಷ್ಟು ಮುಖ್ಯವೋ ಅದನ್ನು ಸಾಧಿಸಲು ಅನುಸರಿಸುವ ಮಾರ್ಗವೂ ಅಷ್ಟೇ ಮುಖ್ಯವೆಂದು ಪ್ರತಿಪಾದಿಸಿದ ಗಾಂಧಿ ಇಂದು ನಮಗೆ ಅಸಂಗತನಾಗಿ ಕಾಣಿಸಲು ಕಾರಣ ಇಂದಿನ ನಮ್ಮ ಗುರಿ ಮತ್ತು ಮಾರ್ಗ ಎರಡೂ ನೀಚತನದಿಂದ ಕೂಡಿರುವುದೇ ಆಗಿದೆ. ಸ್ವೇಚ್ಛಾನುಸಂಧಾನ ಮತ್ತು ಸಮಯಸಾಧಕತನಗಳೇ 'ಡಿಪ್ಲೋಮಸಿ' ಎನಿಸಿಕೊಂಡಿರುವ ಸಧ್ಯದ ಪರಿಸ್ಥಿತಿಯಲ್ಲಿ ಗಾಂಧಿಯ ನಿಷ್ಕಳಂಕ ಸರಳ ಬೊಚ್ಚುನಗೆ ಕುಟಿಲತೆಯ ಹುನ್ನಾರಾಗಿ ನಮಗೆ ಕಂಡರೆ ಅಚ್ಚರಿ ಏನಿಲ್ಲ. ಸೇವಾಮನೋಭಾವದ ಡಾ|| ಮೋದಿ, ಸ್ವಪೇನ್ ಚಕ್ರವರ್ತಿ ಗಾಂಧಿ ನಮಗೆ ಅವ್ಯವಹಾರಿಕ ಹುಂಬರಂತೆ ಕಾಣುತ್ತಾರೆ. ಮೇಲೆ ಉಲ್ಲೇಖಿಸಿದ ತೆರನ ವೃದ್ಧರಂತಹ ಜನ ಉಸಿರಾಡುತ್ತಿರುವುದರಿಂದಲೇ ಇಷ್ಟಾದರೂ ಮಳೆ-ಬೆಳೆ ಆಗುತ್ತಿರುವುದು ಎಂದು ಹೇಳಿದರೆ ಅವೈಜ್ಞಾನಿಕವಾದರೂ ಅತಿಶಯೋಕ್ತಿಯಲ್ಲ ●

---

ನನ್ನ ಜನರಾಡುವ
ಮೆಚ್ಚಿಕೆಯ ಮಾತುಗಳು
ಕ್ಷಣ ಖುಷಿ ತಂದು
ಸಂತೈಸಿದರೆ,
ನಿಂದನೆಯ ಮಾತುಗಳು
ಸ್ಥಿರವಾದ ಗುರಿಯೆಡೆಗೆ
ಚಲಿಸಲು
ಛಲ ತುಂಬುತ್ತವೆ,
ಬದುಕಲು ಕಲಿಸುತ್ತವೆ.

ಕೆ. ನೀಲಾ, ಬೀದರ್,

ಲ್ಯಾಂಪಿನಡಿಯಲ್ಲಿ
ಚಿತ್ರಿಸಿದ ನನ್ನ ಗುಡಿಸಲು
ಪುಸ್ತಕದಲ್ಲಿ ಅಚ್ಚಾಗಿ
ಬರೆದವರ 'ಬಿಲ್ಡಿಂಗ್'
ತಲೆ ಎತ್ತಿದಾಗಲೇ
ಅರ್ಥವಾದದ್ದು
'ಗುಡಿಸಲು' ಮಹತ್ವ.

ಕೆ. ನೀಲಾ, ಬೀದರ್.

---

ಎಂತಹ ಸುಂದರ ನಿನ್ನ ಮಂದಹಾಸ
ಒಳಗಿನ ಹುಳುಕನು ಮುಚ್ಚಿಡುವ ಮೋಸ
ನಿನ್ನ ಮೋಸಕೆ ನಾನಾದೆ ಬಲಿ ಪಶು
ಈ ನೋಟ ಹೇಗೆ ತಾಳಿತು ನನಮನಸು
ತಾಳಿಕೋ ಮನವೇ ತಾಳಿಕೋ
ಮರೆಯಲಾರದ ಪಾಠವಿದು ಕಲಿತುಕೋ ಕಲಿತುಕೋ.

ಕೆ. ಲಕ್ಷ್ಮಿ ಹೊಸಪೇಟೆ.

## ಅವಳ ಬದುಕಿನ ಸೂತ್ರ :

ಆವರ
ಮಧುಪಾನದ ರಾತ್ರಿಗರಳಿದ
ಬೆಳದಿಂಗಳಲ್ಲಿ,

ಬೆವೆತ ಅನಾಥ ಬೆವರು
ನಿಶೆಯು ಶೀಸೆಯು
ಬುರುಗಿನಬ್ಬರದಲ್ಲಿ
ತೇಲಿ, ಬೆತ್ತಲಾಗಿ ಹರಿಯಿತ್ತು,

ಬದುಕಿನ ಗಡಿಯಾರದ ರೆಕ್ಕೆಗಳು;
ನಿರಾಶೆಯು ಒಡಲಲ್ಲಿ
ಬೆಂಕಿಯು ಬಯಲಲ್ಲಿ
ಬದುಕು ಮೊಗಚಿ

ಅವಳ ಕಣ್ಣಿನಲ್ಲರಳುವ ಚಂದ್ರ
ಸುಟ್ಟುಹೋದ,
ತಾರೆಗಳು ಕೊಳೆತವು!

ಹಗಲು ಅತ್ತಾಗ
ಕತ್ತಲೆಯು ಹುತ್ತ ಬೆಳೆಯುತ್ತಾ
ಹಸುವಿನ ಹುಚ್ಚೆದ್ದಲೆಗಳಿಗೆ
ಹಡಗು ನಡುಗಿತ್ತು!

ಅವಳು ಕೂಗಿದಳು
ಅವಳಂತಹವರ ಕೂಗನ್ನೆ ಕೂಗಿದಳು
ದೆವ್ವಗಳು—ಬನ್ನಿ
ದೆವ್ವಗಳು—ಬನ್ನಿ
ತೋಳಗಳು ಗಹಿ ಗಹಿಸಿದವು
ಕರಾಳ ಕತ್ತಲು ಚಾಚಿದ ನಾಲಿಗೆಯ ಮೇಲೆ
ಧರ್ಮದ ಕಳ್ಳು ಕುಡಿದ,
ದೆವ್ವಹಿಡಿದ
ಪ್ರಜಾ ಪ್ರಭುತ್ವದ ಹಟ್ಟಿಯಲ್ಲಿ
ಮೇವು ಹಾಕಿ ಸಾಕಿದ
ತಾಕತ್ತುಗೊಳಿಸಿದ

ಮಹಾಮುತ್ತಿನ ದೆವ್ವಗಳು !
ಪೋಲಿಸರ ಬೂಟಿನ
ಸರಿದಾಟದ ಸದ್ದಿಗೆದ್ದವು
ಅವರ ಸೀಳು
ತೊಡೆಯು ತುರುಕೆಯು
ಪರಚುವಿಕೆಗೆದ್ದವು

ದೇವರು ದಿಂಡಿರುಗಳ ದೊಂಬರಾಟಕ್ಕೆ
ಕೇಕೆ, ಚಪ್ಪಾಳೆ, ಕುಣಿತ, ಗೊಂದಲಾಟಕ್ಕೆ

ಬದುಕು ಹಾದಿಯು ಮೇಲೆ
ಹಾದಿ ಬದುಕಿನ ಮೇಲೆ
ಅವಳ ಬದುಕಿನ
ಸಮುದ್ರದಂಚಿನಲ್ಲಿ
ಸಾವಿನೊಂದಿಗೆ ಕೂತು ಕಾಯ್ದವು ರಣಹದ್ದುಗಳು!

ಬಾನಗಲದ
ಅವಳ ನೆಳಲ್ಲಿ
ಹೆಣ್ಣು ಹೆಂಡದ
ಕಪ್ಪು ಕಾಲುವೆ ಹರಿಸಿ ತೇಲಿ ನಲಿಯುವ ನಾಡೆ!

ನಿಮ್ಮ ದಾಹಕ್ಕಾಗಿ
ಅನಂತತೆಯು ಆಳದಲ್ಲಿ
ಅಪ್ಪಿಕೊಂಡ
ಅಕ್ಟೋಪಸ್ ಗಳೇ !

ಕಾಯುತ್ತಿದೆ ಕಾಲ,
ಅವಳೆದೆಯಲ್ಲಿ ಹಾಲುಣ್ಣುವ
ಬೆಂಕಿಯಲ್ಲಿ ಬೆಳೆವ
ಎಳೆಕಂದಗಳ ಸೂಕ್ಷ್ಮ ನೋಟದಲ್ಲಿ !

ಪಿ. ಆರ್. ವೆಂಕಟೇಶ್.
ಹೂವಿನಹಡಗಲಿ.



ಅಂಕಣ

# ನೆಲ್ಸನ್ ಮಾಂಡೆಲ್

□ ಪರಶುರಾಮ ಕಲಾಲ್.

ದಕ್ಷಿಣ ಆಫ್ರಿಕಾದ ಫಲವತ್ತಾದ ಎದೆಯಲ್ಲಿ ಅಖಂಡ ಸಂಪತ್ತು ಇದೆ. ವಜ್ರದ, ಕಲ್ಲಿದ್ದಲಿನ ಗಣಿಗಳು, ವ್ಯವಸಾಯ ಯೋಗ್ಯ ಭೂಮಿಗಳು, ಅರಣ್ಯಗಳು ಆ ಸಂಪತ್ತಿನ ಬಹುಪಾಲನ್ನು ಕಬಳಿಸುತ್ತಿರುವ ಅಮೇರಿಕಾ, ಇಂಗ್ಲೆಂಡ್, ಜಪಾನಿನ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಹಿತಾಸಕ್ತಿ ಕಾಯುವ ಕೈಗೊಂಬೆ ಸರ್ಕಾರಗಳನ್ನು ನಡೆಸುತ್ತವೆ ಅಂತ ಹದ್ದೇ ದಕ್ಷಿಣ ಆಫ್ರಿಕಾದ ಬಿಳಿತೊನ್ನಿನ ರೋಗಿಷ್ಠ ಪ್ರಿಟೋರಿಯಾ ಸರ್ಕಾರ,

ಆಫ್ರಿಕಾ ನೆಲದಲ್ಲಿರುವ ಅದಮ್ಯ ಪ್ರಕೃತಿಯ ಕೊಡುಗೆ, ಕರಿಯರ ಬೇತನದಲ್ಲಿ ಮಿಂದು ಹೊರ ಬರುವ ವಜ್ರ, ಕಲ್ಲಿದ್ದಲು, ಚಿನ್ನದಂತೆ ಕರಿಯರ ಬದುಕಿನಿಂದ ಹೊರಬಂದ ಕಪ್ಪು ವಜ್ರವೇ 'ನೆಲ್ಸನ್ ಮಾಂಡೆಲ್' ಕರಿಯರ ಹೋರಾಟದ ತುಡಿತ ಈತನಿಗೆ ಜನ್ಮ ನೀಡಿತು. ಇತ ಕರಿಯರ ಹೋರಾಟಕ್ಕೆ ತನ್ನ ತೆರೆದುಕೊಂಡ ಈ 'ಕೊಡುಕೊಳ್ಳುವಿಕೆ' ಯಲ್ಲಿ ಜೈಲುಕೋಣೆಯೊಳಗೆ 'ಜೀವಾವಧಿ' ಶಿಕ್ಷೆ ಅನುಭವಿಸಬೇಕಾಯಿತು, ಜೈಲಿನಲ್ಲಿಯೇ ಈತನಿಗೆ ಮೊನ್ನೆ 70 ವರ್ಷ ತುಂಬಿದವು. ಅದರಲ್ಲಿ 20 ವರ್ಷ ಜೈಲು ಅನುಭವ. ಜಗತ್ತು ಬಿಡುಗಡೆಯ ಹಾಡಿನ ಧ್ವನಿ ಎತ್ತರಿಸಿ ಕೇಳಿತು, ನಿಜವಾದ ಬಂಧಿ ಯಾರು? ಏಳುಸುತ್ತಿನ ಕೋಟೆಯೊಳಗೆ ಬಿಗಿಕಾವಲಿನಲ್ಲಿ ತನ್ನನ್ನು ತಾನೇ ಬಂಧಿಸಿಕೊಂಡು ಕನಸುಗಳಲ್ಲಿ ಕಾಡುವ ಕರಿಯರ ಭೂತಗಳಿಗೆ ಬಿಳಿಚಿಕೊಂಡಿರುವ ಪ್ರಿಟೋರಿಯಾದ ಬೋಥಾ, ಇಂಗ್ಲೆಂಡ್ ಎಂಬ ಮುದಿನಾಯಿ ಅಮೇರಿಕಾದ ಶ್ವೇತ ಭವನದ ಬಂಧಿ ರೇಗಣ್ಣ ತಲೆ ತಗ್ಗಿಸುತ್ತಾರೆ. ಮಾತುಗಳು ಸಾಯುತ್ತಿವೆ ಕರಿಯರ ಹೋರಾಟ ಆತ್ಮವಿಶ್ವಾಸದ ತಲೆ ಎತ್ತುತ್ತದೆ. ಬೆಂಜಮಿನ್ ಮೊಲೈಯಾಸ್'ನ ಕಾವ್ಯದ ನಾಲಿಗೆ ಪಟಪಟಿಸುತ್ತದೆ. ಮಾಂಡೆಲ್ ಜೈಲು ಕೋಣೆಯೊಳಗಿನಿಂದಲೇ ಎಲ್ಲಾ ದೇಶಗಳ ವಿಸಾಗಾಲಿಗೆ ತೂರಿ, ಎಲ್ಲಾ ಗಡಿಗಳ ದಾಟಿ, ಎಲ್ಲಾ ಬಣ್ಣದವರ, ಎಲ್ಲಾ ಭಾಷೆಯವರ ಮಾನವಂತ ಹೃದಯಗಳ ಬಾಗಿಲು ತೆರೆದು ಮಾತಾಡುತ್ತಾನೆ.

ಹೆಪ್ಪುಗಟ್ಟಿದ ಸಮುದ್ರ ಭೋರ್ಗರೆಯುತ್ತದೆ. ಅಲೆಗಳು ಎಲ್ಲಾ ದಡಗಳಿಗೆ ಅಪ್ಪಳಿಸಿ ಪ್ರತಿಧ್ವನಿಸುತ್ತದೆ. ಜೈಲುಗೋಡೆಗಳು ಶಿಥಿಲವಾಗುತ್ತವೆ. ಸೂರ್ಯ ಸರಳುಗಳನ್ನು ಭೇದಿಸಿಕೊಂಡು ಮಾಂಡೆಲ್‌ನನ್ನು ತಬ್ಬಿ ಕೊಳ್ಳುತ್ತಾನೆ.
ಹಕ್ಕಿಗಳು ವಿಮೋಚನೆಯ ಹಾಡನ್ನು ಚಿಲಿಪಿಲಿಗುಟ್ಟುತ್ತವೆ. ●

ಯಶಸ್ವೀ ಪ್ರಯೋಗ.

## ಬೆಕ್ಕು – ಬಾವಿ – ನಾಟಕ–ವಿಮರ್ಶೆ

ಹುಬ್ಬಳ್ಳಿಯಲ್ಲಿ ನಡೆದ ರಾಜ್ಯ ಮಟ್ಟದ ನಾಟಕ ಸ್ಪರ್ಧೆಯಲ್ಲಿ 'ಮೂರನೇ ಶ್ರೇಷ್ಠ' ನಾಟಕವೆಂದು ಬಹುಮಾನ ಪಡೆದುಕೊಂಡಿರುವ 'ಬಾವು' ತಂಡದವರ ಬೆಕ್ಕು–ಬಾವಿ ( ರಚನೆ :– ಶ್ರೀ ಬಾಲುರಾವ್ ) ನಾಟಕವನ್ನು ಹೊಸಪೇಟೆಯಲ್ಲಿ ಕಳೆದ ಸೆಪ್ಟೆಂಬರ್ 8 ರಂದು ನಗರಸಭಾ ಕಲಾಮಂದಿರದಲ್ಲಿ ಯಶಸ್ವಿಯಾಗಿ ಪ್ರಯೋಗಿಸಲಾಯಿತು.

ಮನೆಯ ಬಾವಿಯಲ್ಲಿ ಬೆಕ್ಕು ಬಿದ್ದಿದೆ ಎಂದು ಭ್ರಮಿಸಿರುವ ಮಡಿವಂತ ಬ್ರಾಹ್ಮಣ ವಕೀಲ ಶಾಮರಾವ್ ಮತ್ತು ಆತನ ವಿಧವೆ ತಾಯಿ ವೆಂಕಜ್ಜಿಗೆ, ಅದನ್ನು ಹೊರತೆಗೆಸಿ ಪುನಃ ಬಾವಿಯನ್ನು ಶುದ್ಧೀಕರಿಸಿ ಉಪಯೋಗಿಸುವವರೆಗೆ ನೀರಿನ ಸಮಸ್ಯೆಗೆ ಪರ್ಯಾಯ ಮಾರ್ಗ ಹುಡುಕುವುದೇ ಒಂದು ದೊಡ್ಡ ಸಮಸ್ಯೆಯಾಗಿ ಕಾಡುತ್ತದೆ.

ಹೀಗೆ ಸಾಮಾನ್ಯವೆನಿಸುವ ಒಂದು ಘಟನೆಯ ಸುತ್ತ ಬಿಚ್ಚಿಕೊಳ್ಳುವ ನಾಟಕ ಜೀವಂತ ಬದುಕಿಗೆ ಎದುರಾಗುವ ಸಮಸ್ಯೆಗಳಿಗೆ ಸ್ಪಂದಿಸಲಾರದೇ ಜಡಗೊಂಡು ನಿಷ್ಕ್ರಿಯವಾದ ಮನಸ್ಸುಗಳ ಪ್ರತೀಕದ 'ಧ್ವನಿ' ಯನ್ನು ಬದುಕು ಒಡ್ಡುವ ಅನಿರೀಕ್ಷಿತ ಸಮಸ್ಯೆಗಳಿಗೆ ಎದೆಯೊಡ್ಡಿ ಮುನ್ನುಗುವ ದಿಟ್ಟ ಸ್ವಭಾವದ ಅಳಸಿಂಗಾಚಾರನ ಪಾತ್ರಪ್ರವೇಶದಿಂದ ಪಡೆದುಕೊಳ್ಳುವುದು ಆತನ ವ್ಯಕ್ತಿತ್ವದ ಹಿಂದಿನ ಪ್ರೇರಣೆಯನ್ನು ಕಂಡುಕೊಂಡಾಗ ವಕೀಲ ಶ್ಯಾಮರಾವ್ ಮತ್ತು ಆತನ ತಾಯಿ ವೆಂಕಜ್ಜಿ ಮಾನವೀಯ ಸ್ಪಂದನಕ್ಕೆ ಓಗೊಡುವ ಆಶಯವು ನಾಟಕದ ಕೊನೆಯಲ್ಲಿ ವ್ಯಕ್ತವಾಗುತ್ತದೆ.

ಅಳಸಿಂಗಾಚಾರನ ಪಾತ್ರಕ್ಕೆ – ತನ್ನ ಸಾವನ್ನಾಗಲಿ, ಸೋಲನ್ನಾಗಲಿ ಅಷ್ಟು ಸುಲಭ ಒಪ್ಪಿಕೊಳ್ಳಲಾರದ ಸ್ವಭಾವದ (ಬಾವಿಯಲ್ಲಿ ಬೀಳದ) ಬೆಕ್ಕಿಗೆ ಸಮನ್ವಯಿಸಿರುವುದರಿಂದ ಬೆಕ್ಕು ಬಾವಿಗೆ ಬೀಳುವುದೇ ಅಸ್ವಾಭಾವಿಕವೆಂದು ತಾಯಿ–ಮಗನಿಗೆ (ಅಥವಾ ಪ್ರೇಕ್ಷಕರಿಗೆ) ಹೊಳೆದಾಗ ನಾಟಕ ಹೊಸ ಆಯಾಮ ಪಡೆದುಕೊಂಡು ಸ್ಥಗಿತಗೊಂಡ ಮನಸ್ಸುಗಳು ಚಲನಶೀಲ ಬದುಕಿಗೆ ಓಗೊಡುವಂತಾಗುತ್ತದೆ.

ಇಡೀ ನಾಟಕ ಒಂದೇ ದೃಶ್ಯದಲ್ಲಿ ನಡೆಯುವುದರಿಂದಲೇ ನಡುನಡುವೆ ಕೊ[illegible] ಬೇಸರವೆನಿಸಿದರೂ, ನವಿರಾದ ಹಾಸ್ಯವು ಅದನ್ನು ಮರೆಮಾಡುವಲ್ಲಿ ನಾಟಕದ ಪ್ರಯೋಗವು ಮಹಾಬಲೇಶನನಿರ್ದೇಶನದಲ್ಲಿ ರೂಪಗೊಂಡು ಸಫಲವಾಗಿರುವುದರ ಜೊತೆಗೆ ವಾಸ್ತವಶೈಲಿಯ ರಂಗ ಸಜ್ಜಿಕೆ, ಸಹಜಾಭಿನಯದಲ್ಲಿ ಮುಖ್ಯ ಪಾತ್ರಧಾರಿಗಳಾದ ಶ್ರೀಮತಿ ಯಶೋಧರಮ್ಮ (ವೆಂಕಜ್ಜಿ,) ಬದರೀನಾರಾಯಣ (ಶ್ಯಾಮರಾವ್) ಮತ್ತು ಮಾಬ್ಲಿ (ಅಳಸಿಂಗಾಚಾರ್) ಗಮನಾರ್ಹರಾಗುವಂತೆಯೇ ಉಳಿದ ಪಾತ್ರಧಾರಿಗಳೂ ನಾಟಕಕ್ಕೆ ಪೂರಕವಾಗಿ ಅಭಿನಯಿಸಿದ್ದಾರೆ.

ಅಶೋಕ ಕುಮಾರ ಕೆ.

## ಚಲನೆ

ಮೊನ್ನೆಗಳನ್ನ
ನಿನ್ನೆಗಾಗಿ ಸಂರಕ್ಷಿಸಿದೆ !
ಮತ್ತೇ
ನಿನ್ನೆಗಳನ್ನು
ಇಂದಿಗೆ :
ಇಂದನ್ನ ನಾಳೆಗೆ
ನಾಳೆಗಳನ್ನು–ಮುಂಬರುವ ದಿನಗಳಿಗೆ
ವರ್ಷಗಳಿಗೆ

ಎಷ್ಟೋ ಮುತುವರ್ಜಿವಹಿಸಿದರೂ
ಕೊಳೆತು ಹೋದವಲ್ಲ
ಅನುಭವಿಸದೇ
ನೀ ಕೂಡಿಟ್ಟ
ಘಳಿಗೆಗಳು;
ತಿನ್ನಲಾರದೇ
ಆಸೆಯಿಂದ
ಕೂಡಿಟ್ಟ ಧಾನ್ಯದಂತೆ.

ಸೂಕ್ಷ್ಮವಾದುದು
ಗೆಳೆಯ ;
ನಿನ್ನೆಯನ್ನಲೆಂದೇ
ಇಂದು ಬೆಳೆಯುತ್ತದೆ
ನಾಳೆಗಾಗಿ
ಅದು ಸಾಯಲೇಬೇಕು.

ಕೆ. ಫಣಿ ರಾಜ್.

ಶ್ರೀ ಸಿದ್ಧೇಶ್ವರ ಪವರ್ ಪ್ರಿಂಟರ್ಸ್ ಹೊಸಪೇಟೆ.